# ಆರ್.ಬಿ.ಚಿಲಮಿ ಅವರ ಬದುಕು-ಬರಹ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕ

ಈಶ್ವರಗೌಡ ಎಂ.ಚೋಬಾರಿ

ಮಾರ್ಗದರ್ಶಕರು

ಡಾ.ಎಸ್.ಆರ್.ಚನ್ನವೀರಪ್ಪ
ಹಿರಿಯ ಶ್ರೇಣಿ ಅಧ್ಯಾಪಕರು

ಹಸ್ತಪ್ರತಿ ಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೭-೦೮

# ಆರ್.ಬಿ.ಚಿಲಮಿ ಅವರ ಬದುಕು-ಬರಹ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕ

**ಈಶ್ವರಗೌಡ ಎಂ.ಚೋಬಾರಿ**



ಮಾರ್ಗದರ್ಶಕರು

**ಡಾ.ಎಸ್.ಆರ್.ಚನ್ನವೀರಪ್ಪ**

ಹಿರಿಯ ಶ್ರೇಣಿ ಅಧ್ಯಾಪಕರು






ಹಸ್ತಪ್ರತಿ ಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೭-೦೮

# ಪ್ರಮಾಣ ಪತ್ರ

**"ಆರ್.ಬಿ.ಚಿಲಮಿ ಅವರ ಬದುಕು-ಬರಹ"** ಎಂಬ ನಿಬಂಧವನ್ನು **'ಡಾ.ಎಸ್.ಆರ್.ಚನ್ನವೀರಪ್ಪ'** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತೇನೆ. ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಈಶ್ವರಗೌಡ ಎಂ.ಚೋಬಾರಿ**
ಸಂಶೋಧನಾ ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ :

# ದೃಢೀಕರಣ ಪತ್ರ

**"ಆರ್.ಬಿ.ಚಿಲಮಿ ಅವರ ಬದುಕು-ಬರಹ"** ಎಂಬ ಶೀರ್ಷಿಕೆಯ ನಿಬಂಧವನ್ನು **ಈಶ್ವರಗೌಡ ಎಂ.ಚೋಬಾರಿ** ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**(ಡಾ.ಎಸ್.ಆರ್.ಚನ್ನವೀರಪ್ಪ)**
ಮಾರ್ಗದರ್ಶಕರು
ಹಿರಿಯ ಶ್ರೇಣಿ ಉಪನ್ಯಾಸಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ :

## ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಲಯದ ಹಸ್ತಪ್ರತಿಶಾಸ್ತ್ರ ವಿಭಾಗದಲ್ಲಿ ಎಂ.ಫಿಲ್ ಅಧ್ಯಯನ ಮಾಡಲು ಅನುವು ಮಾಡಿಕೊಟ್ಟ ಕುಲಪತಿಗಳು ಹಾಗೂ ನನ್ನ ವಿದ್ಯಾಗುರುಗಳಾದ ಡಾ.ಎ.ಮುರಿಗೆಪ್ಪನವರಿಗೆ, ಹಿಂದಿನ ಪ್ರಭಾರ ಕುಲಪತಿಗಳಾದ ಡಾ.ಕೆ.ವಿ.ನಾರಾಯಣ ಅವರಿಗೆ,

ಅಧ್ಯಯನಾಂಗದ ನಿರ್ದೇಶಕರಾದ ಡಾ.ಪಾಂಡುರಂಗ ಬಾಬು ವರಿಗೆ, ವಿಶ್ವವಿದ್ಯಾಲಯದ ಕುಲಸಚಿವರಾದ ಮಾನ್ಯ ಡಾ.ಹಿ.ಚಿ.ಬೋರಲಿಂಗಯ್ಯನವರಿಗೆ, ಹಿಂದಿನ ಕುಲಸಚಿವರಾದ ಶ್ರೀ ವಿ.ಶಂಕರ್ ಅವರಿಗೆ,

ಗದುಗಿನ ತೋಂಟದಾರ್ಯ ಮಠದ ಜ.ಡಾ.ಸಿದ್ಧಲಿಂಗ ಮಹಾಸ್ವಾಮಿಗಳು ಮತ್ತು ಶ್ರೀ ನಾಗನೂರು ರುದ್ರಾಕ್ಷಿಮಠದ ಶ್ರೀ.ಮ.ನಿ.ಪ್ರ ಸಿದ್ಧರಾಮ ಮಹಾಸ್ವಾಮಿಗಳವರಿಗೆ, ಎಂ.ಫಿಲ್ ವಿಷಯದ ಆಯ್ಕೆ, ಮೂಲಭೂತ ಸಿದ್ಧತೆ, ಆಕರಗಳನ್ನು ಸೂಚಿಸಿ ಸಂದೇಹಗಳನ್ನು ಪರಿಹರಿಸಿ, ಕರಡು ಪ್ರತಿಗಳನ್ನು ತಿದ್ದಿ ಆತ್ಮೀಯತೆಯಿಂದ ಮಾರ್ಗದರ್ಶನ ನೀಡಿದ ಹಸ್ತಪ್ರತಿಶಾಸ್ತ್ರ ವಿಭಾಗದ ಹಿರಿಯ ಅಧ್ಯಾಪಕರಾದ ಡಾ.ಎಸ್.ಆರ್.ಚನ್ನವೀರಪ್ಪ, ಗುರುಗಳಿಗೆ.

ಹಸ್ತಪ್ರತಿಶಾಸ್ತ್ರ ವಿಭಾಗದಲ್ಲಿ ಸಂಶೋಧನೆಗೆ ಸಂಬಂಧಿಸಿದಂತೆ ಸೂಕ್ತ ಸಲಹೆಗಳನ್ನು ನೀಡುತ್ತಾ, ಅಧ್ಯಯನಕ್ಕೆ ಸಹಕಾರವನ್ನು ನೀಡಿದ ವಿಭಾಗದ ಮುಖ್ಯಸ್ಥರಾದ ಡಾ.ಎಸ್.ಎಸ್.ಅಂಗಡಿ ಗುರುಳಿಗೆ. ವಿಭಾಗದ ಪ್ರಾಧ್ಯಾಪಕರಾದ ಡಾ.ವಿ.ಎಸ್.ಬಡಿಗೇರ, ಡಾ.ಎಫ್.ಟಿ.ಹಳ್ಳಿಕೇರಿ, ಡಾ.ಕೆ.ರವೀಂದ್ರನಾಥ ಗುರುಗಳಿಗೆ ಮತ್ತು ವಿಭಾಗದ ಸಿಬ್ಬಂದಿಗಳಿಗೆ,

ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿ ಆಕರ ಗ್ರಂಥಗಳನ್ನು ಅಧ್ಯಯನ ಮಾಡಲು ಅನುವು ಮಾಡಿಕೊಟ್ಟ ಗ್ರಂಥಾಲಯದ ಮುಖ್ಯಸ್ಥರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ.

ಸ್ನಾತಕೋತ್ತರ ಪದವಿ ಹಂತದಲ್ಲಿ ಸಂಶೋಧನೆಯಲ್ಲಿ ಆಸಕ್ತಿ ಹುಟ್ಟಿಸಿದ ಗುರುಗಳಾದ ದಿ.ಡಾ.ಬಿ.ಆರ್.ಹಿರೇಮಠ, ಡಾ.ವೀರಣ್ಣರಾಜೂರ, ಡಾ.ಚನ್ನಕ್ಕ ಪಾವಟೆ, ಡಾ.ಎಸ್.ಎಲ್.ಸಣ್ಣೇಲ್ಲಪ್ಪನವರ, ಡಾ.ಜೆ.ಎಂ.ನಾಗಯ್ಯ ಗುರುಗಳಿಗೆ.

ನನ್ನ ವಿದ್ಯಾಭ್ಯಾಸದ ಆರಂಭದಿಂದ ಇಲ್ಲಿಯತನಕ ಪ್ರೋತ್ಸಾಹಿಸಿದ ಪೂಜ್ಯ ದೊಡ್ಡಪ್ಪ-ದೊಡ್ಡಮ್ಮ, ಪೂಜ್ಯ ತಂದೆ-ತಾಯಿಯವರಿಗೆ, ಸಹೋದರ, ಸಹೋದರಿಯರಿಗೆ ಮತ್ತು ಬಂಧು ಬಳಗದವರಿಗೆ.

ಎಂ.ಫಿಲ್ ಅಧ್ಯಯನಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಕೊಟ್ಟು ಸೂಕ್ತ ಮಾಹಿತಿಯನ್ನು ನೀಡಿ ಪ್ರೋತ್ಸಾಹಿಸಿದ ಡಾ.ಆರ್.ಬಿ.ಚಿಲಮಿ ಮತ್ತು ಅವರ ಕುಟುಂಬ ವರ್ಗದವರಿಗೆ.

ಅಧ್ಯಯನದ ಆರಂಭದಿಂದ ಕೊನೆಯವರೆಗೂ ಸೂಕ್ತ ಸಲಹೆಗಳನ್ನು ನೀಡಿ ಆತ್ಮೀಯತೆಯಿಂದ ಸಹಕರಿಸಿದ ಹಿರಿಯ ಸ್ನೇಹಿತರಾದ ವೀರೇಶ ಉತ್ತಂಗಿ ಮತ್ತು ನಿರಂಜನ. ರಾ.ನ, ಕುಪ್ಪೇರಾವ್, ಹುಲೆಪ್ಪ ಸಂಡೂರ, ಸೀತಾರಾಮ್, ಎಂ.ಎಂ.ಹಿರೇಮಠ ಹಾಗೂ ಹಂದ್ರಾಳ್ ಸಹೋದರರಿಗೆ. ಸಹಪಾಠಿ ಮಿತ್ರರಾದ ಸುರೇಶ, ಸಂಗಮೇಶ, ಶಾಂತಪ್ಪ, ಮೈಲಾರಪ್ಪ, ವಿಜಯಶ್ರೀ, ಸುಮಂಗಲಾ, ರಾಜೇಶ್ವರಿ, ಗೋವಿಂದ, ಈಶ್ವರರಾವ್, ರಾಕೇಶ್, ರಾಘು, ಯಲ್ಲಣ್ಣ, ಸಿ.ಎಂ.ತಳವಾರ, ಸಿ.ಎಂ.ಕಾಳಣ್ಣವರ, ಯರಿಯಪ್ಪ, ಚಂದ್ರಶೇಖರ ಬಡಿಗೇರ, ಅವೀತ, ಈರಣ್ಣ, ಶಂಕರ, ಮತ್ತು ವಿಶ್ವವಿದ್ಯಾಲಯದ ವಸತಿ ನಿಲಯದ ಎಲ್ಲ ಸ್ನೇಹಿತರಿಗೂ,

ಮತ್ತು ಗದುಗಿನ ಬಸವೇಶ್ವರ ಪದವಿ ಮಹಾವಿದ್ಯಾಲಯದ ಪ್ರಾಚಾರ್ಯರಾದ ಶ್ರೀ ಬಿ.ಬಿ.ಗೌಡರ ಮತ್ತು ಸಿಬ್ಬಂದಿ ವರ್ಗದವರಿಗೆ ಹಾಗೂ [redacted] [redacted] ವಿದ್ಯಾರ್ಥಿಗಳಿಗೆ ವಿಶೇಷ ಕೃತಜ್ಞತೆಗಳು ಮತ್ತು ಅಕ್ಷರ ಸಂಯೋಜನೆ ಮಾಡಿಕೊಟ್ಟ 'ಮಾನಸ ಗ್ರಾಫಿಕ್ಸ್' ಕಮಲಾಪುರ ಅವರಿಗೂ ನನ್ನ ವಂದನೆಗಳು.

**ಈಶ್ವರಗೌಡ ಎಂ. ಚೋಬಾರಿ**
(ಎಂ.ಫಿಲ್.ಸಂಶೋಧನಾ ವಿದ್ಯಾರ್ಥಿ)
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

# ಅಧ್ಯಾಯ-ಒಂದು

# ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಕನ್ನಡ ಸಾಹಿತ್ಯ ತನ್ನದೇ ಆದ ವೈಶಿಷ್ಟ್ಯಗಳನ್ನು ಹೊಂದಿದೆ. ಆಧುನಿಕ ಕನ್ನಡ ಸಾಹಿತ್ಯ ಸಂದರ್ಭ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಅತ್ಯಂತ ಮಹತ್ವ ಪೂರ್ಣವಾದುದು. ಹಳಗನ್ನಡ ಸಾಹಿತ್ಯದ ಪ್ರೇರಣೆ, ಪರಿಕರಗಳನ್ನು ಸ್ವೀಕರಿಸಿಕೊಂಡು ಬೇರೆಯಾಗಿ, ನಿರಂತರವಾಗಿ ಪರಂಪರೆಯ ಪ್ರಜ್ಞೆಯಲ್ಲಿಯೇ ಹೊಸ ಹೊಸ ಮಜಲುಗಳನ್ನು, ತಿರುವುಗಳನ್ನು ಆರಿಸಿಕೊಂಡು ಸ್ವತಂತ್ರವಾಗಿ ವೈವಿಧ್ಯಮಯವಾಗಿ ಬೆಳೆದುಬಂದಿದೆ. ಹೊಸಗನ್ನಡ ಸಾಹಿತ್ಯ ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಕಾಲಘಟ್ಟಗಳ ಸನ್ನಿವೇಶಗಳನ್ನು ನಿರ್ಮಾಣ ಮಾಡಿಕೊಳ್ಳುತ್ತ ಸುದೀರ್ಘವಾಗಿ ಬೆಳೆದುಬಂದಿದೆ. ಸಾಹಿತ್ಯ ಘಟ್ಟಗಳಲ್ಲಿ ಅನೇಕ ಪ್ರತಿಭಾವಂತ ಸಾಹಿತಿಗಳು ರೂಪಗೊಂಡಿದ್ದಾರೆ. ಇಷ್ಟೊಂದು ಬಹು ಸಂಖ್ಯೆಯ ಸಾಹಿತಿಗಳು ಕನ್ನಡ ಸಾಹಿತ್ಯ ಚರಿತ್ರೆಯ ಯಾವ ಕಾಲಘಟ್ಟಗಳಲ್ಲಿಯೂ ಕಂಡುಬರುವುದಿಲ್ಲ. ಹೊಸಗನ್ನಡ ಸಾಹಿತ್ಯವು ಪ್ರತಿಭಾವಂತ ಸಾಹಿತಿಗಳಿಂದ ಕಾವ್ಯ, ಕಾದಂಬರಿ, ಸಣ್ಣಕತೆ, ನಾಟಕ, ಪ್ರವಾಸಕಥನ, ಜೀವನ ಚರಿತ್ರೆ, ಆತ್ಮಚರಿತ್ರೆ, ಇತ್ಯಾದಿ ರೂಪಗಳು ಪ್ರಬುದ್ಧವಾಗಿ ನೆಲೆಗೊಂಡಿವೆ.

ಸಾಹಿತ್ಯ ವ್ಯಕ್ತಿಯ ಸೃಷ್ಠಿಯಾದರೂ ಸಮೂಹದ ಆಸ್ತಿ. ಅದರ ಹುಟ್ಟಿನ ಉದ್ದೇಶವಾದರೂ ಅದೇ ಆಗಿದೆ. ಆ ಕೃತಿಗಳ ಮೂಲಕ ಆ ಕೃತಿಕಾರನ ಮೌಲ್ಯಮಾಪನ ಪ್ರತಿ ಪೀಳಿಗೆಯಲ್ಲೂ ಹಲವು ಬಾರಿ ನಡೆಯುತ್ತಾ ಹೋಗುತ್ತದೆ. ಅಂತಃ ಸಾಮರ್ಥ್ಯವಿದ್ದಷ್ಟು ಕಾಲ ಆ ಕೃತಿಕಾರ ಬದುಕುತ್ತಾನೆ. ಈ ಕಾರಣಗಳಿಂದಲೇ ಸಾಹಿತ್ಯದ ಗಂಭೀರ ಅಭ್ಯಾಸದಲ್ಲಿ ಬೇರೆ ಬೇರೆ ಲೇಖಕರ ವೈಯಕ್ತಿಕ ಕೊಡುಗೆಗಳನ್ನು ಕುರಿತು ವಿವರವಾದ ಅಧ್ಯಯನಕ್ಕೆ ಪ್ರಮುಖವಾದ ಸ್ಥಾನವಿದೆ. ಸಾಹಿತ್ಯಕ್ಕೆ ಗಣನೀಯ ಕೊಡುಗೆ ನೀಡಿದ ಲೇಖಕರ ಬದುಕು ಬರಹಗಳನ್ನು ಸಮಗ್ರವಾಗಿ ಅಭ್ಯಸಿಸುವುದು, ಆತನ ಸಾಹಿತ್ಯಕ್ಕೆ ಬೆಲೆ ಕಟ್ಟುವುದು, ಆ

ತಲೆಮಾರಿನ ಇತರ ಲೇಖಕರಿಗಿಂತ ಈತನ ಕೆಲಸ ಹೇಗೆ ಭಿನ್ನ ಎಂಬುದನ್ನು ಗುರುತಿಸುವುದು, ಆತನ ಸ್ಥಾನ ನಿರ್ಣಯ ಮಾಡುವುದು. ಇವೆಲ್ಲ ಇಂಥ ಅಧ್ಯಯನದಲ್ಲಿ ಸೇರ್ಪಡೆಯಾಗಬೇಕಾದ ಅಂಶಗಳು, ಜೊತೆಗೆ-ಅಂತಹ ಕೃತಿಗಳನ್ನು ರಚಿಸಿದ ಆ ಭಾಷೆಯ ಇಲ್ಲವೇ ಬೇರೆ ಭಾಷೆಯ ಲೇಖಕರ ಕೃತಿಗಳ ಜೊತೆಗೆ ಈತನನ್ನು ತೂಗಿ ನೋಡುವುದು- ಇಂಥ ತೌಲನಿಕ ಅಧ್ಯಯನವನ್ನು ಅಂಥ ಅಭ್ಯಾಸಿಗಳು ಮಾಡಬಹುದು. ಈ ರೀತಿಯ ಅಧ್ಯಯನ ಸಾಹಿತ್ಯ ವಿಮರ್ಶೆಯ ಗಾಂಭೀರ್ಯವನ್ನು ಹೆಚ್ಚಿಸುತ್ತದೆ. ಆ ಭಾಷೆಯ ಸಾಹಿತ್ಯರಾಶಿಗೆ ಆ ವ್ಯಕ್ತಿಯ ಕೊಡುಗೆ ಏನೆಂಬುದನ್ನು ವಿವರಿಸಿ ಮೌಲ್ಯಮಾಪನ ಮಾಡುತ್ತದೆ. ಮರೆತು ಹೋಗಬಹುದಾದ ಮಾಣಿಕ್ಯಗಳನ್ನು ಮತ್ತೆ ಮತ್ತೆ ಸಾಣೆಹಿಡಿದು ಜನತೆಯ ಕಣ್ಣೆದುರಗಿಟ್ಟು, ಅವರಲ್ಲಿ ಸ್ಫೂರ್ತಿಯನ್ನು ಅಭಿಮಾನವನ್ನು ಕೆರಳಿಸುತ್ತದೆ. ಒಮ್ಮೆ ಆ ಸಾಹಿತಿಗೆ ಅಗತ್ಯಕ್ಕಿಂತ ಹೆಚ್ಚಿನ ಬೆಲೆಯನ್ನು ಸಮಾಜ ಕೊಟ್ಟದ್ದಲ್ಲಿ ಅದನ್ನೂ ಸರಿಪಡಿಸುತ್ತದೆ. ಇಂಥ ಕೆಲಸ ಪ್ರತಿ ಭಾಷೆಯಲ್ಲೂ ಯಾವಾಗಲೂ ಹಲವರಿಂದ ನಡೆಯುತ್ತಿರಬೇಕಾಗುತ್ತದೆ.

ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಹಲವಾರು ಕವಿಗಳು ತಮ್ಮದೇ ಆದ ಸಾಹಿತ್ಯ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದ್ದಾರೆ. ಅವರಲ್ಲಿ ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಶಿವರಾಮ ಕಾರಂತ, ವಿ.ಕೃ.ಗೋಕಾಕ, ಮಧುರ ಚೆನ್ನ, ಆನಂದಕಂದ, ಜಿ.ಎಸ್.ಶಿವರುದ್ರಪ್ಪ, ಗೋಪಾಲಕೃಷ್ಣ ಅಡಿಗ, ಡಿ.ಎಸ್.ಕರ್ಕಿ, ಮಾಸ್ತಿ ವೆಂಕಟೇಶ ಅಯ್ಯಂಗಾರ, ಬಸವರಾಜ ಕಟ್ಟೀಮನಿ, ಅ.ನ.ಕೃ, ತ.ರಾ.ಸು, ಚದುರಂಗ, ಯು.ಆರ್.ಅನಂತಮೂರ್ತಿ, ಎಸ್.ಎಲ್.ಭೈರಪ್ಪ, ಗಿರೀಶ ಕಾರ್ನಾಡ, ತ್ರಿವೇಣಿ, ಎಂ.ಕೆ.ಇಂದಿರಾ, ಸಾರಾಅಬೂಬಕರ, ಆರ್.ನರಸಿಂಹಾಚಾರ್, ಡಿ.ಎಲ್.ನರಸಿಂಹಾಚಾರ್, ಎಸ್.ಜಿ.ನರಸಿಂಹಾಚಾರ್, ಹಟ್ಟಿ ಯಂಗಡಿ ನಾರಾಯಣರಾಯ, ಎಲ್.ಬಸವರಾಜ, ಕೆ.ಜಿ.ಕುಂದಣಗಾರ ಎಸ್.ಸಿ.ನಂದಿಮಠ, ಶಂಬಾ ಜೋಷಿ, ಆ.ನೇ.ಉಪಾಧ್ಯ ಹೀಗೆ ಹಲವಾರು ಸಾಹಿತಿಗಳು, ಸಂಶೋಧಕರು ತಮ್ಮದೇ ಆದ ಸೇವೆ ಸಲ್ಲಿಸಿದ್ದಾರೆ. ಈ ಹಿರಿಯ ಸಾಹಿತಿಗಳ, ಸಂಶೋಧಕರ ಪ್ರೇರಣೆ ಪ್ರಭಾವದಿಂದಾಗಿ ಅನೇಕ ಕಿರಿಯ ಸಾಹಿತಿಗಳು, ಸಂಶೋಧಕರು ಕನ್ನಡ ಸಾಹಿತ್ಯ ಸೇವೆ ಮಾಡುತ್ತಲಿದ್ದಾರೆ.

ಕನ್ನಡ ಸಾಹಿತ್ಯಕ್ಕೆ ಬೆಳಗಾವಿ ಜಿಲ್ಲೆಯ ಸಾಹಿತಿಗಳು, ಸಂಶೋಧಕರು ವಿಶಿಷ್ಟವಾದ ಕೊಡುಗೆ ನೀಡಿದ್ದಾರೆ. ಪ್ರಸ್ತುತ ಕಾಲಘಟ್ಟದಲ್ಲಿ ಅನೇಕ ಸಾಹಿತಿಗಳು ಕಂಡುಬರುತ್ತಾರೆ. ಅವರುಗಳಲ್ಲಿ ಚಂದ್ರಶೇಖರ ಕಂಬಾರ, ರಾಘವೇಂದ್ರ ಪಾಟೀಲ, ಡಿ.ಎಸ್.ಚೌಗಲೆ, ಜ್ಯೋತಿ ಹೊಸೂರ, ಡಾ.ಎಸ್.ಆರ್.ಗುಂಜಟ್ಟಿ, ಡಾ.ರಾಮಕೃಷ್ಣ ಮರಾಠೆ, ಡಾ.ಬಸವರಾಜ ಮಲಶೆಟ್ಟಿ, ಡಾ.ನಿಂಗಣ್ಣ ಸಣ್ಣಕ್ಕಿ, ಡಾ.ಬಾಳಣ್ಣ ಸೀಗಿಹಳ್ಳಿ, ಡಾ.ವ್ಹಿ.ಎಸ್.ಮಾಳಿ, ಡಾ.ಸಿ.ಕೆ.ನಾವಲಗಿ, ಡಾ.ಶಿವಾನಂದ ಮೂಲಿಮನಿ, ಡಾ.ಅಶೋಕ ನರೋಡೆ, ಡಾ.ಶ್ರೀನಿವಾಸ ಕುಲಕರ್ಣಿ,

ಬಾಳಾಸಾಹೇಬ ಲೋಕಾಪೂರ, ವ್ಹಿ.ಸಿ.ಅಂಟೀನ, ಬಾಳು ಉಪಾಧ್ಯೆ ಎ.ಆರ್.ಪಾಟೀಲ ಹೀಗೆ ಹಲವಾರು ಹಿರಿಯ-ಕಿರಿಯ ಸಾಹಿತಿಗಳ ಸಾಲಿನಲ್ಲಿ ಸೇರುವ ಆರ್.ಬಿ.ಚಿಲಮಿಯವರು ಒಬ್ಬರಾಗಿ ನಿಲ್ಲುತ್ತಾರೆ. ಆರ್.ಬಿ.ಚಿಲಮಿ ಅವರು ಕಾವ್ಯ, ಆಧುನಿಕ ವಚನ, ಜೀವನ ಚರಿತ್ರೆ ಸಂಶೋಧನೆ, ಸಂಪಾದನಾ ಕ್ಷೇತ್ರಗಳಲ್ಲಿ ತಮ್ಮನ್ನು ಗುರುತಿಸಿ ಕೊಂಡವರಾಗಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಆರ್.ಬಿ.ಚಿಲಮಿ ಅವರ ಬದುಕು-ಬರಹಗಳನ್ನು ಕುರಿತು ಅಧ್ಯಯನ ಮಾಡುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಕಳೆದ ಮೂವತ್ತು ವರ್ಷಗಳಿಂದ ಎಲೆಮರೆ ಕಾಯಿಯಂತೆ ಸಾಹಿತ್ಯ ಸೇವೆ ಮಾಡುತ್ತ ಬಂದಿರುವ ಆರ್.ಬಿ.ಚಿಲಮಿ ಅವರ ಬದುಕು ಅತ್ಯಂತ ಸರಳ ನೇರ, ಸಜ್ಜನಿಕೆಯ ಸ್ವಭಾವ ಹೊಂದಿರುವ ಶ್ರೀಯುತರ ಬದುಕು ಹೋರಾಟಮಯವಾದುದು ಬದುಕಿನುದ್ದಕ್ಕೂ ಅನೇಕ ಕಷ್ಟ ಕಾರ್ಪಣ್ಯಗಳನ್ನು ಎದುರಿಸುತ್ತಾ ಮುನ್ನಡೆದುದು. ಅವರ ಆತ್ಮಸ್ಥೈರ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಈ ಅವಧಿಯಲ್ಲಿ ಧೃತಿಗೆಡದೆ ಸಾಹಿತ್ಯ ರಚಿಸಿ ಕನ್ನಡ ವಾಗ್ದೇವಿಗೆ ಗೌರವ ಸಲ್ಲಿಸುವುದನ್ನು ನೋಡಿದಾಗ, ಇವರಿಗೆ ಸಾಹಿತ್ಯದ ಬಗೆಗೆ ಮತ್ತು ಭಾಷೆಯ ಬಗೆಗೆ ಇರುವ ಅಭಿಮಾನವನ್ನು ಎತ್ತಿ ತೋರಿಸುತ್ತದೆ. ಇವರು ಬರೆದ ಕೃತಿಗಳು ಕಡಿಮೆಯಾದರು ಅವುಗಳ ಸಾಹಿತ್ಯ ಮೌಲ್ಯ ಮಹತ್ವಪೂರ್ಣವಾದದು. ಎಂತಹ ಸಂದರ್ಭ ಒದಗಿಬಂದರೂ ಸಾಹಿತ್ಯ ರಚನೆಯನ್ನು ಬಿಟ್ಟವರಲ್ಲ, ಸಾಹಿತ್ಯ ಸೇವೆಯೇ ಇವರ ಕಾಯಕವಾಗಿದೆ. ಯಾವುದೇ ಪ್ರಚಾರ ಪ್ರಶಸ್ತಿಗಳಿಗೆ ಎಂದೂ ಆಸೆ ಪಟ್ಟವರಲ್ಲ, ತಾವಾಯಿತು ತಮ್ಮ ಅಧ್ಯಾಪಕ ವೃತ್ತಿ ಮತ್ತು ಸಾಹಿತ್ಯ ಕೃಷಿಯ ಕೆಲಸವಾಯಿತು ಎನ್ನುವಷ್ಟರ ಮಟ್ಟಿಗೆ ತಮ್ಮನ್ನು ಕನ್ನಡ ಸಾಹಿತ್ಯ ರಚನಾ ಪ್ರವೃತಿಯಲ್ಲಿ ತೊಡಗಿಸಿಕೊಂಡಿದ್ದಾರೆ ಎನ್ನುವುದರಲ್ಲಿ ಎರಡು ಮಾತಿಲ್ಲ.

ಹೀಗಾಗಿ ಆರ್.ಬಿ.ಚಿಲಮಿ ಅವರ ಬದುಕು ಮತ್ತು ಬರಹಗಳನ್ನು ಕುರಿತು ಅಧ್ಯಯನ ಮಾಡಿ; ಸಮೀಕ್ಷೆ ಮಾಡಿ ಕನ್ನಡ ಸಾಹಿತ್ಯದಲ್ಲಿ ಅವರ ಸ್ಥಾನವನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಆರ್.ಬಿ.ಚಿಲಮಿ ಅವರ ಬದುಕು ಮತ್ತು ಬರಹಗಳನ್ನು ಕುರಿತು ಅಧ್ಯಯನದ ಅನುಕೂಲಕ್ಕಾಗಿ ಒಟ್ಟು ಏಳು ಅಧ್ಯಾಯಗಳನ್ನು ಮಾಡಿಕೊಂಡಿದ್ದೇನೆ. ಅವುಗಳನ್ನು ಈ ಕೆಳಕಂಡಂತೆ ವಿಂಗಡಿಸಿಕೊಳ್ಳಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ ಮತ್ತು ಸ್ವರೂಪವಾಗಿದೆ. ಈ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಉದ್ದೇಶವನ್ನು ವಿವರಿಸುವುದರೊಂದಿಗೆ ಅಧ್ಯಯನದ ಸ್ವರೂಪವನ್ನು ತಿಳಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಆರ್.ಬಿ.ಚಿಲಮಿ ಅವರ ಜೀವನ ಸಾಧನೆ ಕುರಿತಾಗಿದೆ. ಇದರಲ್ಲಿ ಅವರ ಮನೆತನ, ಬಾಲ್ಯ ಜೀವನ, ಶಿಕ್ಷಣ, ವೃತ್ತಿ ಜೀವನ, ಕೌಟುಂಬಿಕ ಜೀವನ, ಚಿಲಮಿಯವರ ಹವ್ಯಾಸ ಕಾರ್ಯ ಚಟುವಟಿಕೆಗಳು, ಚಿಲಮಿ ಅವರ

ವ್ಯಕ್ತಿತ್ವ, ಮತ್ತು ಸೃಜನಶೀಲ ಬರಹಗಾರರಾಗಿ ಚಿಲಮಿ; ಹೀಗೆ ಚಿಲಮಿಯವರ ಬದುಕಿನ ಹಲವು ಸಂಗತಿಗಳನ್ನು ವಿವರಿಸಲಾಗಿದೆ.

ಮೂರನೇಯ ಅಧ್ಯಾಯದಲ್ಲಿ ಆರ್.ಬಿ.ಚಿಲಮಿ ಅವರು ಈವರೆಗೆ ಬರೆದು ಪ್ರಕಟಿಸಿದ ಮತ್ತು ಅಪ್ರಕಟಿತ ಕೃತಿಗಳಾದ ಬತ್ತೀಸರಾಗ್, ವಚನ ವೃಷಭ, ಬ.ಗಿ.ಯಲ್ಲಟ್ಟಿ: ಸಮಗ್ರ ಸಾಹಿತ್ಯ, ಜಾನಪದ ಸಿರಿ, ಜೀವನ ಚರಿತ್ರೆಗಳಾದ ಕುಳ್ಳೂರು ಕಲ್ಮಠದ ಶ್ರೀ ಶಿವಯೋಗಿಗಳ ಚರಿತ್ರೆ, ಕುಳ್ಳೂರು ಕಲ್ಮಠದ ಶ್ರೀ ರೇವಣಸಿದ್ದೇಶ್ವರ ಶಿವಯೋಗಿಗಳ ಚರಿತ್ರೆ, ಕುಳ್ಳೂರು ಕಲ್ಮಠದ ಶ್ರೀ ಸಿದ್ದರಾಮೇಶ್ವರರ ಚರಿತ್ರೆ, ಪ್ರಕಟಿತ ಲೇಖನಗಳು ಮತ್ತು ಸಂಪಾದಿತ ಕೃತಿಗಳನ್ನು ಈ ಅಧ್ಯಾಯದಲ್ಲ ಸ್ಥೂಲವಾಗಿ ಪರಿಚಯ ಮಾಡಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಆರ್.ಬಿ.ಚಿಲಮಿ ಅವರ ಪಿಎಚ್.ಡಿ., ಮಹಾಪ್ರಬಂಧ 'ಬ.ಗಿ.ಯಲ್ಲಟ್ಟಿ : ಸಮಗ್ರ ಸಾಹಿತ್ಯ' ಕೃತಿಯನ್ನು ವಿವೇಚನೆ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಚಿಲಮಿ ಅವರು ರಚಿಸಿದ ಜೀವನ ಚರಿತ್ರೆಗಳಾದ ಕುಳ್ಳೂರು ಕಲ್ಮಠದ ಶ್ರೀ ರೇವಣಸಿದ್ದೇಶ್ವರ ಚರಿತ್ರೆ, ಕುಳ್ಳೂರು ಕಲ್ಮಠದ ಶ್ರೀ ಸಿದ್ಧರಾಮೇಶ್ವರ ಚರಿತ್ರೆ, ಕುಳ್ಳೂರು ಕಲ್ಮಠದ ಶ್ರೀ ಶಿವಯೋಗಿಗಳ ಚರಿತ್ರೆಗಳನ್ನು ವಸ್ತುನಿಷ್ಠವಾಗಿ ಸಮೀಕ್ಷೆ ಮಾಡಲಾಗಿದೆ. ಆರನೆಯ ಅಧ್ಯಾಯದಲ್ಲಿ ಚಿಲಮಿ ಅವರ ಕವನ ಸಂಕಲನವಾದ 'ಬತ್ತೀಸರಾಗ' ಇದರಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಇದರಲ್ಲಿ ಪ್ರಕೃತಿ ಚಿತ್ರಣ, ಸಾಮಾಜಿಕ ಚಿತ್ರಣ, ವ್ಯಕ್ತಿ ಚಿತ್ರಣ, ಧಾರ್ಮಿಕ ನೇತಾರರು, ಅಂತರಂಗ ವಿವೇಚನೆ ಎಂಬ ಒಳ ಅಧ್ಯಾಯ ಮಾಡಿಕೊಂಡು ವಿವೇಚನೆ ಮಾಡಲಾಗಿದೆ.

ಏಳನೇಯ ಅಧ್ಯಾಯವು ಸಮಾರೋಪಪಾಗಿದ್ದು ಕನ್ನಡ ಸಾಹಿತ್ಯಕ್ಕೆ ಆರ್.ಬಿ.ಚಿಲಮಿ ಅವರ ಒಟ್ಟು ಕೊಡುಗೆ ಏನು ಎಂಬುದನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಅಲ್ಲದೆ ಅಧ್ಯಯನದ ಒಟ್ಟು ಫಲಿತಗಳನ್ನು ತಿಳಿಸಲಾಗಿದೆ. ಕೊನೆಗೆ ಅನುಬಂಧಗಳನ್ನು ಕೊಡಲಾಗಿದೆ. ಇದರಲ್ಲಿ ಆರ್.ಬಿ.ಚಿಲಮಿ ಅವರ ಜೀವನದ ಪ್ರಮುಖ ಘಟನೆಗಳು ಆರ್.ಬಿ.ಚಿಲಮಿ ಅವರ ವಂಶವೃಕ್ಷ, ಆರ್.ಬಿ.ಚಿಲಮಿ ಅವರು ಒಟ್ಟು ಪ್ರಕಟಿತ ಮತ್ತು ಅಪ್ರಕಟಿತ ಕೃತಿಗಳನ್ನು ಕೊಡಲಾಗಿದೆ. ಮತ್ತು ಕೊನೆಯಲ್ಲಿ ಗ್ರಂಥಋಣ ಕೊಡಲಾಗಿದೆ. ಒಟ್ಟನಲ್ಲಿ ಈ ಅಧ್ಯಯನದ ಚೌಕಟ್ಟನ್ನು ಈ ರೀತಿಯಲ್ಲಿ ಕೊಡಲಾಗಿದೆ.

# ಅಧ್ಯಾಯ-ಎರಡು

## ಆರ್.ಬಿ.ಚಿಲಮಿ ಅವರ ಜೀವನ ಸಾಧನೆ

ಸಾಹಿತ್ಯ, ಸಂಗೀತ, ಕಲೆ, ಶಿಕ್ಷಣ, ಸಂಸ್ಕೃತಿ ಮೊದಲಾದ ಕ್ಷೇತ್ರಗಳಲ್ಲಿ ತನ್ನದೇ ಆದ ವೈಶಿಷ್ಟ್ಯತೆಗಳಿಂದ ಗುರುತಿಸಿಕೊಂಡಿರುವ ಉತ್ತರಕರ್ನಾಟಕದ ಬಹುದೊಡ್ಡ ಜಿಲ್ಲೆ ಬೆಳಗಾವಿ. ಅಖಂಡ ದಕ್ಷಿಣ ಭಾರತದಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹಚ್ಚಿದ ಕಿತ್ತೂರ ಸಂಸ್ಥಾನ ಬೆಳಗಾವಿ ಜಿಲ್ಲೆಯಲ್ಲಿರುವುದು ಹೆಮ್ಮೆಯ ಸಂಗತಿ. ಶ್ರೀಕೃಷ್ಣಪಾರಿಜಾತ, ಬಯಲಾಟ, ಸಂಗ್ಯಾಬಾಳ್ಯಾದಂತಹ ಸಣ್ಣಾಟ ಮೊದಲಾದ ಪ್ರದರ್ಶನ ಕಲೆಗಳಿಂದಲೂ, ಕಿತ್ತೂರು ರಾಣಿಚನ್ನಮ್ಮ. ಬೆಳವಡಿ ಮಲ್ಲಮ್ಮ, ಸಂಗೊಳ್ಳಿ ರಾಯಣ್ಣ ಮುಂತಾದ ಚಾರಿತ್ರಿಕ ವ್ಯಕ್ತಿಗಳಿಂದಲೂ ಎಸ್.ಸಿ.ನಂದಿಮಠ, ಕೆ.ಜಿ.ಕುಂದಣಗಾರ, ಆ.ನೇ.ಉಪಾಧ್ಯ, ಶಂಬಾಜೋಷಿ, ಡಿ.ಎಸ್.ಕರ್ಕಿ, ಬೆಟಗೇರಿಕೃಷ್ಣಶರ್ಮ, ಬಸವರಾಜಕಟ್ಟಿಮನಿ, ಮಿರ್ಜಿಅಣ್ಣಾರಾಯ, ಡಿ.ಸಿ.ಪಾವಟೆ, ಚಂದ್ರಶೇಖರ ಕಂಬಾರ ಹಲವಾರು ಹಿರಿಯ ವಿದ್ವಾಂಸರಿಂದಲೂ ಏಣಿಗಿ ಬಾಳಪ್ಪ, ಹುಕ್ಕೇರಿ ಬಾಳಪ್ಪ ರಂತಹ ಕಲಾವಿದರಿಂದಲೂ, ಇಡೀ ಕರ್ನಾಟಕದ ಗಮನ ಸೆಳೆದಿರುವ ಬೆಳಗಾವಿ ಜಿಲ್ಲೆ ಕರ್ನಾಟಕ ಮಹಾರಾಷ್ಟ್ರ ಗಡಿಯ ವಿವಾದದ ಕೇಂದ್ರ ಬಿಂದುವಾಗಿಯೂ ಹೆಸರು ಮಾಡಿದೆ. ಇಂತಹ ಜಿಲ್ಲೆಯನ್ನು ಯಾವ ದೃಷ್ಟಿಯಿಂದ ನೋಡಿದರೂ ಸಮೃದ್ಧಿಯ ಸೆಲೆಯಾಗಿ ಕಾಣುತ್ತದೆ. ಅಲ್ಲದೆ ಗೊಡಚಿ ಮತ್ತು ಸೌದತ್ತಿಗಳಂತಹ ಧಾರ್ಮಿಕ ಕ್ಷೇತ್ರಗಳನ್ನು ತನ್ನೊಡಲಲ್ಲಿ ಗರ್ಭೀಕರಿಸಿಕೊಂಡಿದೆ.

ಇಂತಹ ಸಮೃದ್ಧಿಯ ನಾಡಿನಲ್ಲಿ ಪ್ರಸಕ್ತ ಸಂದರ್ಭದಲ್ಲಿ ಅನೇಕ ಹೊಸ ತಲೆಮಾರಿನ ಸಾಹಿತಿಗಳು, ರಂಗ ಕಲಾವಿದರು, ಸಂಶೋಧಕರು, ಸಂಗೀತಗಾರರು ಇನ್ನು ಮುಂತಾದ ಮಹಾನ್ ವ್ಯಕ್ತಿಗಳು ತಮ್ಮದೇ ಆದ ಕ್ಷೇತ್ರಗಳಲ್ಲಿ ಕಾರ್ಯೋನ್ಮುಖರಾಗಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ರಾಘವೇಂದ್ರ ಪಾಟೀಲ, ಡಿ.ಎಸ್.ಚೌಗಲೆ, ಡಾ.ವ್ಹಿ.ಎಸ್.ಮಾಳಿ, ಡಾ.ನಿಂಗಣ್ಣ ಸಣ್ಣಕ್ಕಿ, ಡಾ.ಬಸವರಾಜ ಮಲಶೆಟ್ಟಿ, ಡಾ.ಬಾಳಣ್ಣ ಶಿಗೀಹಳ್ಳಿ, ಡಾ.ಜ್ಯೋತಿ ಹೊಸೂರ, ಡಾ.ಸಿ.ಕೆ.ನಾವಲಗಿ, ಡಾ.ರಾಮಕೃಷ್ಣ ಮರಾಠಿ, ಡಾ.ಎಸ್.ಎಸ್.ಗುಂಜಟ್ಟಿ ಬಾಳಾಸಾಹೇಬ ಲೋಕಾಪೂರ, ಕೆ.ಎನ್.ದೊಡ್ಡಮನಿ, ಚಂದ್ರಶೇಖರ ಅಕ್ಕಿ, ಡಾ.ಎಸ್.ಎಸ್.ಅಂಗಡಿ, ಶ್ರೀಮತಿ ಸಿದ್ದಗಂಗಮ್ಮ ಹೀಗೆ ಹಲವಾರು ಹಿರಿಯ ಕಿರಿಯ ಸಾಹಿತಿಗಳ ಸಾಲಿನಲ್ಲಿ ರುದ್ರಣ್ಣ ಬಸಪ್ಪ ಚಿಲಮಿಯವರು

ಕಂಗೊಳಿಸುತ್ತಾರೆ. ಇವರ ಸಾಹಿತ್ಯಿಕ ಬದುಕು ಎಲೆಮರೆಯ ಕಾಯಿಯಂತಿದ್ದು ಬದುಕಿನಲ್ಲಿ ಅನೇಕ ಏರು ಪೇರುಗಳನ್ನು ಕಂಡು ಸತತ ಪರಿಶ್ರಮದಿಂದ ಮೇಲೆ ಬಂದವರು. ಬದುಕಿನ ಆರಂಭದಲ್ಲಿ ಶಿಕ್ಷಣ ಮುಗಿಸಿ ಗದಗ ನಗರದ ಖಾಸಗಿ ಕಾರ್ಖಾನೆಯಲ್ಲಿ ಗುಮಾಸ್ತರಾಗಿ ವೃತ್ತಿ ಜೀವನ ಆರಂಭಿಸಿ ನಂತರ ಪದವಿ ಪೂರ್ವ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ, ಅನಂತರದ ದಿನಗಳಲ್ಲಿ ಪದವಿ ಕಾಲೇಜಿನ ಅಧ್ಯಾಪಕರಾಗಿ, ಪ್ರಸ್ತುತ ಹಾರೂಗೇರಿಯ ಶ್ರೀ ವೃಷಭೇಂದ್ರ ಪದವಿ ಮಹಾವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸುತ್ತಿದ್ದಾರೆ. ಇವರು ಕವಿಯಾಗಿ, ವಚನಕಾರರಾಗಿ, ಗ್ರಂಥಸಂಪಾದನಾಕಾರರಾಗಿ, ಸಂಶೋಧಕರಾಗಿ ಕನ್ನಡ ಸಾಹಿತ್ಯ ಸೇವೆ ಮಾಡುತ್ತಲಿದ್ದಾರೆ. ಇಂತಹ ಸಾಧನ ಜೀವಿಯ ಜೀವನ ಮತ್ತು ಸಾಹಿತ್ಯ ಸಾಧನೆ ಕುರಿತು ಪ್ರಸ್ತುತ ಅಧ್ಯಯನದಲ್ಲಿ ವಿವರಿಸಲಾಗಿದೆ.

**ಮನೆತನ**

ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲೂಕಿನ ಹೊಸಕೋಟೆ ಕನಿಷ್ಟ ಸೌಲಭ್ಯಗಳಿಲ್ಲದ ಒಂದು ಕುಗ್ರಾಮ. ಈ ಹಳ್ಳಿಯಲ್ಲಿ ಒಂದು ಪ್ರಸಿದ್ಧವಾದ ಮನೆತನ ಚಿಲುಮೆ ಎಂಬುದು. ಚಿಲುಮೆ–ಚಿಲಮಿ ಇಂದು ಜನರ ಬಾಯಲ್ಲಿ ವರ್ಣ ವ್ಯತ್ಯಾಸದಿಂದ ಚಿಲಮಿ ಎಂದಾಗಿರಬೇಕು. ಇವರ ಮನೆತನದ ಮೂಲ ಹೆಸರು ಚಿಲುಮೆ. ಆರ್.ಬಿ.ಚಿಲಮಿಯವರನ್ನು ತಮ್ಮ ಮನೆತನದ ಮೂಲ ಇತಿಹಾಸ ಕುರಿತು ಕೇಳಿದಾಗ "ನಮ್ಮ ಮನೆತನಕ್ಕೆ ಈ ಹೆಸರು ಹೇಗೆ ಬಂದಿತು ಎಂಬುದರ ಬಗ್ಗೆ ನಮ್ಮಲ್ಲಿರುವ ಯಾವುದೇ ಕಾಗದ ಪತ್ರಗಳಲ್ಲಿ ವಿವರಗಳು ದೊರೆಯುವುದಿಲ್ಲ. ಆದರೆ ಖ್ಯಾತ ವಿದ್ವಾಂಸರಾದ ಪ್ರೊ.ಬಿ.ಟಿ.ಸಾಸನೂರ ಅವರು 'ಚಿಲಮಿ' ಎಂಬ ಹೆಸರಿನ ಒಂದು ಊರು ರಾಯಚೂರ ಜಿಲ್ಲೆಯಲ್ಲಿದೆ ನಿಮ್ಮ ಪೂರ್ವಜರು ಆ ಊರಿನವರಾಗಿದ್ದು ನಿಜಾಮರ ಆಳ್ವಿಕೆ ಕಾಲದಲ್ಲಿ ಅವರ ದೌರ್ಜನ್ಯ, ಚಿತ್ರಹಿಂಸೆಯನ್ನು ಸಹಿಸದೆ ಮಾನ ಪ್ರಾಣದ ರಕ್ಷಣೆಗಾಗಿ ಆ ಊರನ್ನು ಬಿಟ್ಟು ರಾಮದುರ್ಗ ತಾಲೂಕಿನ ಈ ಹೊಸಕೋಟೆಗೆ ಬಂದು ನೆಲೆಸಿರಬಹುದು. ಆದ್ದರಿಂದ ನಿಮ್ಮ ಮನೆತನಕ್ಕೆ ಚಿಲಮಿ ಎಂಬ ಹೆಸರು ಬಂದಿದೆ" ಎಂಬ ಹೇಳಿಕೆಯನ್ನು ಆರ್.ಬಿ.ಚಿಲಮಿಯವರು ನೆನಪಿಸಿಕೊಳ್ಳುತ್ತಾರೆ. ಅಲ್ಲದೆ "ಹೊಸಕೋಟೆ ಸುತ್ತಮುತ್ತಲಿನ ಗ್ರಾಮಗಳಲ್ಲಿ ಸುಮಾರು ನೂರಾರು ವರ್ಷಗಳ ಹಿಂದೆ ಆ ಪ್ರದೇಶದ ಜನರು ಆರ್.ಬಿ.ಚಿಲಮಿಯವರ ಮುತ್ತಜ್ಜನನ್ನು ತಮ್ಮ ಹೊಲಗಳಲ್ಲಿ ಬಾವಿ ತೋಡಿಸುವ ಸಲುವಾಗಿ ಭೂಮಿಯೊಳಗಿನ ನೀರಿನ ಸೆಲೆ ಅಥವಾ ಅಂತರ್ಜಲ ಪತ್ತೆಹಚ್ಚಲು ಕರೆದುಕೊಂಡು ಹೋಗುತ್ತಿದ್ದರಂತೆ. ಇವರು ತೋರಿಸಿದ ಸ್ಥಳದಲ್ಲಿ ಬಾವಿ ತೋಡಿದಾಗ, ನೀರಿನ ಒರತೆ ಬುಗ್ಗಿಯಾಗಿ ಚಿಮ್ಮಿದ್ದನ್ನು ಕಂಡು ಮತ್ತೆ ಹಲವು ಜನರು ತಮ್ಮ ಹೊಲ–ಗದ್ದೆಗಳಲ್ಲಿ ಇವರಿಂದ ನೀರಿನ ಸೆಲೆಯನ್ನು ಪತ್ತೆಹಚ್ಚಿಸಿ ಬಾವಿ ತೋಡಿಸಿದರು ಆಗ ಅಲ್ಲಿಯೂ ನೀರಿನ ಚಿಲುಮೆ

ಕಾರಂಜಿಯಂತೆ ಪುಟಿದೆದ್ದಿತು. ಅಂದಿನಿಂದ ಜನರು ಈ ಮನೆತನಕ್ಕೆ ಚಿಲುಮೆಯವರು ಎಂದು ಕರೆಯುತ್ತಾ ಬಂದರು ಅದೇ ಇಂದು ಚಿಲಮಿ ಎಂದು ರೂಢಿಗತವಾಗಿ ಉಳಿದುಕೊಂಡು ಬಂದಿದೆ" ಎಂದು ಆರ್.ಬಿ.ಚಿಲಮಿಯವರು ತಮ್ಮ ತಂದೆ ಚಿಕ್ಕವರಿರುವಾಗ ಹೇಳುತ್ತಿದ್ದುದನ್ನು ಜ್ಞಾಪಿಸಿಕೊಳ್ಳುತ್ತಾರೆ.

**ಬಾಲ್ಯ ಜೀವನ**

ಬಸಪ್ಪ ಸಾವಂತ್ರೆವ್ವ ಎಂಬ ಆದರ್ಶ ಶರಣ ದಂಪತಿಗಳ ಮೂರನೆಯ ಮಗನಾಗಿ ದಿನಾಂಕ:೦೨-೦೩-೧೯೫೧ರಲ್ಲಿ ಚಿಲಮಿಯವರು ಜನಿಸಿದರು. ಮಗುವಿಗೆ ತಮ್ಮ ಕುಲದೇವರಾದ ನೀಲಕಂಠರುದ್ರನ ಸ್ಮರಣಾರ್ಥ ರುದ್ರಪ್ಪ ಎಂದು ಹೆಸರಿಟ್ಟರು. ಪ್ರೀತಿಯಿಂದ ಎಲ್ಲರೂ ಇವರನ್ನು ರುದ್ರಣ್ಣ ಎಂದು ಕರೆದರು. ಇವರಿಗಿಂತ ಮೊದಲು ಶಿವಪುತ್ರಪ್ಪ ಮತ್ತು ಈರಣ್ಣ ಎಂಬ ಅಣ್ಣಂದಿರು, ನಾಗಮ್ಮ ಎಂಬ ತಂಗಿ ಹುಟ್ಟಿದ್ದು ಒಟ್ಟು ಇವರ ತಂದೆ-ತಾಯಿಗಳಿಗೆ ನಾಲ್ಕು ಜನ ಮಕ್ಕಳು, ಬಡತನದಲ್ಲಿ ಬೆಂದು ಬೆಂಡಾದ ಬಸಪ್ಪ ಸಾವಂತ್ರೆವ್ವ ಅವರ ಬದುಕು ಸರಸ-ವಿರಸ ಸಿಹಿ-ಕಹಿ ನಗು-ಅಳು ನೋವು ನಲಿವುಗಳ ಸಮಿಶ್ರಣವಾಗಿತ್ತು. ಇವೆಲ್ಲವನ್ನೂ ಮೀರಿದ ಅವರ ತಾಳ್ಮೆ ಹಿರಿದಾದುದು. ಅವರ ಈ ಎಲ್ಲ ಗುಣಗಳ ಮೂರ್ತರೂಪವೇ ರುದ್ರಣ್ಣ ಚಿಲಮಿಯವರು. ರುದ್ರಣ್ಣ ಅವರು ಚಿಕ್ಕವರಿರುವಾಗ ತಮ್ಮ ತಾಯಿ ಜೊತೆ ಹೊಲ, ಮನೆ ಕೆಲಸಗಳಿಗೆ ಹೋಗುತ್ತಿದ್ದರು. ತಮ್ಮ ತಾಯಿ ಮಾಡುತ್ತಿದ್ದ ಕೆಲಸಗಳನ್ನು ನೋಡಿ ಅದರಲ್ಲಿ ಆಸಕ್ತಿ ಕೆರಳಿ ತಾವು ಆ ಕೆಲಸ ಮಾಡಲು ತೊಡಗುತ್ತಿದ್ದರು.

**ಶಿಕ್ಷಣ**

ಪೋಷಕರು ಬಾಲಕ ರುದ್ರಣ್ಣನಿಗೆ ಆರು ವರ್ಷಗಳು ತುಂಬುತ್ತಿದ್ದಂತೆ ಅಂದರೆ ೧೯೫೭ರಲ್ಲಿ ತಮ್ಮ ಸ್ವಗ್ರಾಮದ ಹನುಮಂತ ದೇವರ ಗುಡಿಯಲ್ಲಿ ನಡೆಯುತ್ತಿದ್ದ ಗಾಂವಠಾಣಾ ಶಾಲೆಗೆ ಸೇರಿಸಿದರು ಘಟ್ಟೆಪ್ಪನವರು ಮತ್ತು ಅಡಗಲ್ ಮಾಸ್ತರರು ಇವರಿಗೆ ಬೋಧಕರಾಗಿದ್ದರು. ನಂತರ ೫-೬ನೆಯ ತರಗತಿಗೆ ಈಗಿನಂತಿರುವ ಹಿರಿಯ ಪ್ರಾಥಮಿಕ ಗಂಡು ಮಕ್ಕಳ ಶಾಲೆಗೆ ಸೇರಿಕೊಳ್ಳುತ್ತಾರೆ. ರುದ್ರಣ್ಣ ಅವರಿಗೆ ಹಿಂದಿ ಮತ್ತು ಇಂಗ್ಲೀಷ್ ಕಡ್ಡಾಯವಾಗಿತ್ತು. ಹಿಂದಿ ಅವರಿಗೆ ಜಟಿಲ ವಿಷಯವಾಗಿತ್ತು. ಈ ವಿಷಯದ ಭೋಧಕರು ದು.ಚ.ಕರಿಶಟ್ಟಿ ಗುರುಗಳ ಶಿಷ್ಯತ್ವದಲ್ಲಿ ೬ ಮತ್ತು ೭ ತರಗತಿಯನ್ನು ಪೂರೈಸುತ್ತಾರೆ. ಇವರಿಂದಲೇ ತಾವು ಉತ್ತಮ ಮತ್ತು 'ಆದರ್ಶ ವಿದ್ಯಾರ್ಥಿ' ಎಂಬ ಹೊಗಳಿಕೆಗೆ ಪಾತ್ರನಾಗಿದ್ದೆ ಎಂದು ಆರ್.ಬಿ.ಚಿಲಮಿಯವರು ಹೇಳುತ್ತಾರೆ. ೭ನೇ ತರಗತಿಯಲ್ಲಿ ಬಟ್ಟೆ ನೇಯುವುದು ಕಡ್ಡಾಯವಾಗಿತ್ತು. ಈ ಎಲ್ಲಾ ಅನಿವಾರ್ಯತೆಯನ್ನು ಸ್ವೀಕರಿಸಿ ಮುಲ್ಕಿ ಪರೀಕ್ಷೆಯನ್ನು ಸರಾಗವಾಗಿ ಮುಗಿಸಿದರು.

೧೯೬೫ರಲ್ಲಿ ಸ್ಥಳೀಯರಿಂದ ಪ್ರಾರಂಭವಾದ ಶ್ರೀ ರೇವಣಸಿದ್ದೇಶ್ವರ ಹೈಸ್ಕೂಲಿಗೆ ಸೇರಿ

ಯಾವುದೇ ತೊಂದರೆ ಇಲ್ಲದೆ ಎಸ್.ಎಸ್.ಎಲ್.ಸಿಯನ್ನು ದ್ವಿತೀಯ ಶ್ರೇಣಿಯಲ್ಲಿ ೧೯೬೮ರಲ್ಲಿ ತೇರ್ಗಡೆಯಾದರು. ಇದು ತಂದೆ-ತಾಯಿ, ಸಹೋದರರಿಗೆ ಸಂತೋಷ ತಂದಿತು. ಈತನ್ನೊಬ್ಬನನ್ನಾದರೂ ಉನ್ನತ ವ್ಯಾಸಂಗಕ್ಕೆ ಬೇರೆ ಊರಿಗೆ ಕಳಿಸಬೇಕೆಂಬ ಆಸೆ ಎಲ್ಲರದಾಗಿತ್ತು. ಕಲಿಯಬೇಕೆಂಬ ಹಂಬಲ ರುದ್ರಣ್ಣನಿಗೆ ಗಾಢವಾಗಿತ್ತು. ಇವರ ಅಣ್ಣ ಈರಣ್ಣ ರಾಮದುರ್ಗದಲ್ಲಿದ್ದ ಬಸವೇಶ್ವರ ವಿದ್ಯಾವರ್ಧಕ ಸಂಘದ ಸ್ಟೇಟ್ ಸಂಯುಕ್ತ ಪದವಿ ಪೂರ್ವ ಕಾಲೇಜಿಗೆ ಇವರನ್ನು ಸೇರಿಸಿದರು. ಇದು ಒಂದು ವರ್ಷದ ಕೋರ್ಸ್ ಆಗಿತ್ತು. ಪ್ರಾಚಾರ್ಯ ಡಿ.ಜಿ.ಬೋಳಶೆಟ್ಟಿಯವರು ಇಂಗ್ಲೀಷ್ ಭೋಧಕರು, ಪ್ರೊ.ಪಾವಟೆಯವರು ಕನ್ನಡ ಭೋಧಕರಾಗಿದ್ದರು. ೧೯೬೯ರಲ್ಲಿ ಪಿ.ಯು.ಸಿ ತೇರ್ಗಡೆ ಹೊಂದಿದ ರುದ್ರಣ್ಣನವರು, ೧೯೭೦ರಲ್ಲಿ ಸಿ.ಎಸ್.ಬೆಂಬಳಗಿ ಕಲಾ ವಾಣಿಜ್ಯ ವಿಜ್ಞಾನ ಮಹಾವಿದ್ಯಾಲಯದಿಂದ ಬಿ.ಎ.ಜ್ಯೂನಿಯರ್ ಮತ್ತು ಸೀನಿಯರ್ ಪದವಿ ಪಡೆದುಕೊಂಡರು. ಇಲ್ಲಿ ಕನ್ನಡ ಸಾಹಿತ್ಯವನ್ನು ಪ್ರಧಾನ ವಿಷಯವಾಗಿ ಆಯ್ಕೆ ಮಾಡಿಕೊಂಡಿದ್ದರು. ಬಿ.ಎ.ಓದುತ್ತಿರುವ ಸಮಯದಲ್ಲಿ ಆರ್.ಬಿ.ಚಿಲಮಿಯವರು ಅನೇಕ ಕಷ್ಟಗಳನ್ನು ಎದುರಿಸಿದರು ಮಳೆಗಾಲದಲ್ಲಿ ಮಳೆ ಹೆಚ್ಚು ಬಂದು ಹಳ್ಳಗಳು ತುಂಬಿ ಹರಿದು ಬಸ್ಸು ಊರಿಗೆ ಬರಲು ಸಾಧ್ಯವಾಗುತ್ತಿರಲಿಲ್ಲ. ಆ ದಿನಗಳಲ್ಲಿ ಚಿಲಮಿಯವರು ಮನೆಯಿಂದ ಬುತ್ತಿ ಬರದೆ ಉಪವಾಸವಿರಬೇಕಾಗುತ್ತಿತು. ಇಂತಹ ಪರಿಸ್ಥಿತಿಯಲ್ಲಿ ಕಷ್ಟ ಪಟ್ಟು ಬಿ.ಎ.ಪದವಿ ಪಡೆದರು.

ಆರ್.ಬಿ.ಚಿಲಮಿಯವರು ಉನ್ನತ ವ್ಯಾಸಂಗಕ್ಕೆ ನೀರೆರೆದು ಪೋಷಿಸಿದವರು ತಂದೆ ಹಾಗೂ ಅಣ್ಣ ಈರಣ್ಣ ಈತನದು ಪ್ರಮುಖ ಪಾತ್ರವಾಗಿತ್ತು. ಎಂ.ಎ. ವ್ಯಾಸಂಗಕ್ಕೆಂದು ಕರ್ನಾಟಕ ವಿಶ್ವವಿದ್ಯಾಲಂಯ ಧಾರವಾಡದ ಕನ್ನಡ ವಿಭಾಗದಲ್ಲಿ ಪ್ರವೇಶ ದೊರೆಯಿತು. ಡಾ.ಆರ್.ಸಿ.ಹಿರೇಮಠ.ಡಾ.ಎಂ.ಎಂ.ಕಲಬುರ್ಗಿ, ಡಾ.ಎಂ.ಎಸ್.ಸುಂಕಾಪುರ, ಡಾ.ವಿಲಿಯಂ ಮಾಡ್ತ, ಡಾ.ಬಿ.ಆರ್.ಹಿರೇಮಠ, ಡಾ. ಎ.ಮುರಿಗೆಪ್ಪ, ಡಾ..ವೀರಣ್ಣ ರಾಜೂರ, ಡಾ.ಬಿ.ವ್ಹಿ. ಶಿರೂರ, ಡಾ. ಜಯಂತ ಕುಳ್ಳಿ, ಡಾ.ಕೃ.ಅನ್ವನ್ ಹಲವಾರು ವಿದ್ವಾಂಸರು ಇವರಿಗೆ ಪಾಟ ಬೋಧಿಸುತ್ತಿದ್ದರು. ಈ ಸಮಯದಲ್ಲಿ ಚಿಲಮಿಯವರು ಧಾರವಾಡದ ಮುರುಘಾಮಠದಲ್ಲಿದ್ದುಕೊಂಡು ಅಧ್ಯಯನ ಮಾಡಿ ದ್ವಿತೀಯ ಶ್ರೇಣಿಯಲ್ಲಿ ತೇರ್ಗಡೆಹೊಂದಿ ಎಂ.ಎ. ಪದವಿ ಪಡೆದರು. ೨೦೦೦ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಡಾ.ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಪೀಠದಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ನೊಂದಾಯಿಸಿ ಡಾ.ವ್ಹಿ.ಎಸ್.ಮಾಳಿಯವರ ಮಾರ್ಗದರ್ಶನದಲ್ಲಿ 'ಬ.ಗಿ.ಯಲ್ಲಟ್ಟಿ: ಸಮಗ್ರ ಸಾಹಿತ್ಯ' ಎಂಬ ವಿಷಯದಲ್ಲಿ ಸಂಶೋಧನೆ ನಡೆಯಿಸಿ ೨೦೦೪ರಲ್ಲಿ ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಡಾಕ್ಟರೇಟ್ ಪದವಿ ಪಡೆದರು.

## ವೃತ್ತಿ ಜೀವನ

ಬದುಕಿನಲ್ಲಿ ಹಲವಾರು ಕಷ್ಟ ನಷ್ಟಗಳನ್ನು ಎದುರಿಸಿದ ಆರ್.ಬಿ.ಚಿಲಮಿಯವರು ನೌಕರಿ ಹುಡುಕಾಟಕ್ಕೆ ಮುಂದಾದರು. ೧೯೭೪ರ ಅವಧಿಯಲ್ಲಿ ಸಬ್ ರಿಜಿಸ್ಟ್ರಾರ್ ಹುದ್ದೆಗೆ ಹಣವನ್ನು ಕೊಡಲಾಗದೆ ಕೆಲಸ ಗಿಟ್ಟಿಸುವಲ್ಲಿ ವಿಫಲರಾದರು.

ನಂತರ ಕನ್ನಡ ಉಪನ್ಯಾಸಕನಾಗುವ ಕನಸನ್ನು ಕೈ ಬಿಟ್ಟು ೧೯೭೯ರಲ್ಲಿ ಗದುಗಿನ ಶ್ರೀಎ.ಕೆ.ಶಿವನಗುತ್ತಿಯವರ ಖಾಸಗಿ ಕಾರ್ಖಾನೆಯಾದ ಜಾಯ್ ಫುಡ್ ಪ್ರೋಡೆಕ್ಷನ್ಸನಲ್ಲಿ ಗುಮಾಸ್ತರಾಗಿ ನೇಮಕಗೊಂಡು ೧೯೮೧ರ ವರೆಗೆ ಕಾರ್ಯ ನಿರ್ವಹಿಸಿದರು. ಈ ಹುದ್ದೆಗೆ

ಸಂದರ್ಶನಕ್ಕೆಂದು ಬೆಂಗಳೂರಿಗೆ ಹೋದಾಗ ಅಲ್ಲಿನ ಸಂದರ್ಶಕರು ೨೦ ಸಾವಿರ ರೂಪಾಯಿ ಲಂಚ ಕೊಟ್ಟರೆ ಆ ಹುದ್ದೆ ಕೊಡುತ್ತೇವೆ ಎಂದಾಗ ಕೋಪಗೊಂಡ ಚಿಲಮಿಯವರು ಅದನ್ನು ವ್ಯಕ್ತಪಡಿಸದೆ ನೊಂದುಕೊಂಡು 'ಬಂದ ದಾರಿಗೆ ಸುಂಕವಿಲ್ಲ' ಎಂಬಂತೆ ಮರಳಿ ಬಂದರು. ಹೀಗೆ ಅನೇಕ ಸರಕಾರಿ/ಸಂಸ್ಥೆಗಳ ಕೆಲಸಕ್ಕೆಂದು ಸಂದರ್ಶನಕ್ಕೆ ಹೋಗಿ ಅವರು ಕೇಳುವ ಮಾಸಿಕ ವೇತನ ೨೫೦ರೂಪಾಯಿ ಮಾತ್ರ. ಅನಂತರದ ದಿನಗಳಲ್ಲಿ ಇವರ ಮಾವನವರಾದ ಈಶ್ವರಪ್ಪ ಹಳಕಟ್ಟಿ ಅವರ ಪ್ರಭಾವದಿಂದಾಗಿ ೧೯೮೨ರಲ್ಲಿ ನರಗುಂದ ತಾಲೂಕಿನ ಕೊಣ್ಣೂರು ಶಿಕ್ಷಣ ಸಂಸ್ಥೆಯ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ನೇಮಕಗೊಳ್ಳುತ್ತಾರೆ. ಆಗ ಇವರಿಗೆ ತಮ್ಮ ವೃತ್ತಿಗೆ ಭದ್ರತೆ ದೊರೆಯದ ಕಾರಣ ಆ ಕಾಲೇಜನ್ನು ತೊರೆದು ೧೯೮೨ರಿಂದ ೧೯೮೪ರ ವರೆಗೆ ಶಿರೋಳದ ಮಾದರ ಚನ್ನಯ್ಯ ಆಯ್.ಟಿ.ಆಯ್.ಕಾಲೇಜು ಸೇರಿ ಸಮಾಜಶಾಸ್ತ್ರ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸಿದರು. ಈ ಮಧ್ಯ ಈ ಕಾಲೇಜಿನಲ್ಲಿಯೂ ತಮ್ಮ ವೃತ್ತಿಗೆ ಭದ್ರತೆ ದೊರೆಯುವುದಿಲ್ಲ ಎಂಬ ಅನುಮಾನ ಉಂಟಾಗಿ ಭಯಗೊಂಡು ಆ ಕಾಲೇಜನ್ನು ಬಿಡಲು ನಿರ್ಧರಿಸಿದಾಗ ಬಿಜಾಪುರದ ಎಂ.ಎಸ್.ಖೇಡಾ ಕಾಲೇಜು ಮತ್ತು ಬಿ.ಎಲ್.ಡಿ.ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕ ಹುದ್ದೆಗೆ ಸಂದರ್ಶನಕ್ಕೆ ಹೋಗಿಬಂದರೂ ಅವು ಕೈಗೂಡಲಿಲ್ಲ. ಈ ಸಂದರ್ಭದಲ್ಲಿ ತುಂಬಾ ನಿರಾಸೆ ಹೊಂದಿದರು. ಕೊನೆಗೆ ಅಂತಿಮ ಪ್ರಯತ್ನ ಎಂಬಂತೆ ೧೯೮೫ರಲ್ಲಿ ರಾಯಬಾಗ ತಾಲೂಕಿನ ಹಾರೂಗೇರಿಯ ಶ್ರೀ ವೃಷಭೇಂದ್ರ ಶಿಕ್ಷಣ ಸಂಸ್ಥೆಯ ಪದವಿ ಮಹಾವಿದ್ಯಾಲಯದ ಕನ್ನಡ ಉಪನ್ಯಾಸಕ ಹುದ್ದೆಯ ಸಂದರ್ಶನಕ್ಕೆ ಹಾಜರಾದರು ಆಗ ಶ್ರೀ ಬಿ.ಆರ್.ದರೂರ ಅವರು ರುದ್ರಣ್ಣ ಚಿಲಮಿಯವರನ್ನು ಕನ್ನಡ ಉಪನ್ಯಾಸಕ ಎಂದು ನೇಮಿಸಿಕೊಂಡು ಆಶ್ರಯ ಕೊಟ್ಟು, ಅಭಯ ಹಸ್ತ ನೀಡಿದರು. ಈ ಕಾಲೇಜಿನಲ್ಲಿ ೧೯೯೦ರಲ್ಲಿ ಪೂರ್ಣ ಪ್ರಮಾಣದ ಅಧ್ಯಾಪಕರಾಗಿ ಕಾರ್ಯನಿರ್ವಹಿಸಲು ಆರಂಭಿಸಿದ ಆರ್.ಬಿ.ಚಿಲಮಿಯವರು ಪ್ರಸ್ತುತ ಅದೇ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಬಹಳ ಶ್ರದ್ಧೆ ನಿಷ್ಠೆ ಪ್ರಾಮಾಣಿಕತೆಯಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ. ಅಲ್ಲದೆ ೧೯-೦೭-೨೦೦೭ ರಿಂದ ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರದಲ್ಲಿ ಎಂ.ಫಿಲ್. ಮತ್ತು ಪಿಎಚ್.ಡಿ.ವಿದ್ಯಾರ್ಥಿಗಳಿಗೆ ಸಂಶೋಧನಾ ಮಾರ್ಗದರ್ಶಕರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ.

## ಕೌಟುಂಬಿಕ ಜೀವನ

ಸಾಹಿತಿ ಆರ್.ಬಿ.ಚಿಲಮಿಯವರು ತಮ್ಮ ೫೮ ವರ್ಷಗಳ ಬದುಕಿನಲ್ಲಿ ಅನೇಕ ಏಳುಬೀಳು ಕಂಡವರು, ಇವರಿಗೆ ಅಪಾರ ಶಿಷ್ಯ ಬಳಗ ಇದ್ದಂತೆ ಬಂಧು ಬಳಗವೂ ಇದೆ. ಎಂ.ಎ.ಪದವಿ ಮುಗಿಸಿ ನೌಕರಿಗಾಗಿ ಅಲೆದಾಡುತ್ತಿರುವ ಸಂದರ್ಭದಲ್ಲಿ ಆಗಲೇ ಅವರ ತಂದೆಗೆ ೯೦ವರ್ಷ ದಾಟಿತ್ತು. ರುದ್ರಣ್ಣನವರ ಸಲುವಾಗಿ ಅಣ್ಣ ಈರಣ್ಣನ ಮದುವೆಯನ್ನು ತಂದೆ ಬಸಪ್ಪ ಮುಂದೂಡುತ್ತಾ ಬಂದಿದ್ದರು. ತಂದೆ ಸಮಾಧಾನದಿಂದ "ರುದ್ರಣ್ಣ ನಿಮ್ಮ ಅಣ್ಣ ಈರಣ್ಣನೊಂದಿಗೆ ನಿನ್ನ ಮದುವೆಯನ್ನು ಏಕಕಾಲಕ್ಕೆ ಮಾಡುತ್ತೇವೆ, ಮದುವೆಗೆ ನೀನು ಒಪ್ಪಿಕೊ" ಎಂದಾಗ ರುದ್ರಣ್ಣನವರು ತಿರಸ್ಕರಿಸಿದರು. ಇದರಿಂದ ತಂದೆ ತಾಯಿಗಳಿಗೆ ಚಿಂತೆಯಾಯಿತು. ಮನೆಯಲ್ಲಿ ಮೇಲಿಂದ ಮೇಲೆ ಮದುವೆಗೆ ಒತ್ತಾಯಿಸಿ ಒಪ್ಪಿಸಿದ ಪರಿಯನ್ನು ರುದ್ರಣ್ಣ ಚಿಲುಮಿಯವರು ಹೀಗೆ ಹೇಳುತ್ತಾರೆ. "ಆಗ ನನ್ನ ತಂದೆಗೆ ೯೨ ವರ್ಷಗಳ ವಯಸ್ಸು ನಾನು ನಿಮ್ಮಿಬ್ಬರ ಮದುವೆ ಮಾಡಿ ಕಣ್ತುಂಬಾ ನೋಡಿ ಶಿವನ ಪಾದ ಸೇರಲು ಮುಕ್ತವಾದಂತಾಗುತ್ತದೆ. ಆದುದರಿಂದ ನೌಕರಿ ಸಿಗಲಿ ಬಿಡಲಿ ಅದು ಯಾವಾಗ ಬರುತ್ತದೆಯೋ ಬರಲಿ ಅಥವಾ ಬಿಡಲಿ ನಿಮ್ಮ ಅಣ್ಣನಿಗೆ ನಿನಗಿಂತಲೂ ವಯಸ್ಸಾಯಿತು ಆದ ಕಾರಣ ಮದುವೆ ಮಾಡಿಕೊಳ್ಳಪ್ಪಾ" ಎಂದು ಪ್ರಮುಖ ಹಿರಿಯರಿಂದ ಒತ್ತಡ ತಂದಾಗ ಮದುವೆಗೆ ಒಪ್ಪಿಕೊಳ್ಳಬೇಕಾಯಿತು ಎಂದು ಹೇಳುತ್ತಾರೆ. ತಂದೆಯ ಮಾತಿನಂತೆ ರುದ್ರಣ್ಣ ಚಿಲಮಿಯವರ ಮದುವೆ ನರಗುಂದದ ಶ್ರೀ ಈಶ್ವರಪ್ಪ ಹಳಕಟ್ಟ ಅವರ ಮಗಳು ಸುವರ್ಣಾ ಅವರೊಂದಿಗೆ ದಿನಾಂಕ ೦೪-೦೬-೧೯೭೯ರಂದು ಜರುಗಿತು.

ಇಲ್ಲಿಂದ ರುದ್ರಣ್ಣ ಚಿಲಮಿಯವರ ಬದುಕಿನ ಮತ್ತೊಂದು ಅಧ್ಯಾಯ ಪ್ರಾರಂಭವಾಯಿತು. ಇವರ ಬಾಳಸಂಗಾತಿಯಾಗಿ ಮನದ ಮನೆ ತುಂಬಿದ ಸುವರ್ಣಾರವರು ಸಹನಶೀಲ ಸಂಪನ್ನರಾದವರು. ಪತಿಯ ಪ್ರತಿಯೊಂದು ಕೆಲಸದ ಹಿಂದೆ ಚೈತನ್ಯ ಶಕ್ತಿಯಾಗಿ ನಿಂತು, ಅವರ ಕೆಲಸಗಳಿಗೆ ಜೀವ ತುಂಬುತ್ತಾರೆ. ಇವರ ದಾಂಪತ್ಯದ ಬದುಕಿನಲ್ಲಿ ಎಂದೂ ಬಿರುಕು ಮೂಡಿಲ್ಲ. ಇವರ ಈ ಸಾಮರಸ್ಯದ ಬದುಕನ್ನು ಕಂಡು ತಂದೆ ಬಸಪ್ಪ ಚಿಲಮಿಯವರು ೧೯೮೧ರಲ್ಲಿ ನಿಧನರಾದರು. ಚಿಲಮಿ ದಂಪತಿಗಳಿಗೆ ದಿನಾಂಕ ೦೧-೦೨-೧೯೮೫ರಲ್ಲಿ ರೋಹಿಣಿ ಎಂಬ ಮಗಳು, ದಿನಾಂಕ ೨೧-೦೯-೧೯೮೯ರಲ್ಲಿ ರೋಹಿತ ಎಂಬ ಮಗನು ಜನಿಸಿದರು. ಮಗಳು ರೋಹಿಣಿ ಬಿ.ಎಸ್.ಸಿ.ಬಿ.ಎಡ್. ಮುಗಿಸಿದ್ದಾಳೆ, ಮಗ ರೋಹಿತ ಈಗ ಬಿ.ಇ.ವ್ಯಾಸಂಗ ಮಾಡುತ್ತಿದ್ದಾನೆ.

## ಆರ್.ಬಿ.ಚಿಲಮಿಯವರ ಹವ್ಯಾಸ ಕಾರ್ಯ ಚಟುವಟಿಕೆಗಳು

ಯಾವತ್ತು ಕ್ರಿಯಾಶೀಲ ಮನೋಭಾವದ ಚಿಲಮಿಯವರು ವಿವಿಧ ಸಂಘ ಸಂಸ್ಥೆಗಳ ಆಜೀವ ಸದಸ್ಯರಾಗಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ ರಾಯಬಾಗ ಘಟಕದ

ಕಾರ್ಯದರ್ಶಿಯಾಗಿದ್ದುಕೊಂಡು ತಾಲೂಕು ಸಾಹಿತ್ಯ ಸಮ್ಮೇಳನ ೨೦೦೨ರಲ್ಲಿ, ಬೆಳಗಾವಿ ಜಿಲ್ಲಾ ಸಾಹಿತ್ಯ ಸಮ್ಮೇಳನ ೨೦೦೬ರಲ್ಲಿ, ಅದ್ದೂರಿಯಿಂದ ನಡೆಯುವಲ್ಲಿ ಪ್ರಮುಖ ಪಾತ್ರ ವಹಿಸಿರುವರು. ದಣಿವರಿಯದೆ, ಬಿಡುವಿಲ್ಲದೆ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಎಲ್ಲರ ಪ್ರೀತಿಗೆ ಪಾತ್ರರಾಗಿದ್ದಾರೆ. ರಾಯಬಾಗ ತಾಲೂಕಿನ ಸಂಪನ್ಮೂಲ ವ್ಯಕ್ತಿಯಾಗಿ ಸರ್ಕಾರದ ವಿವಿಧ ಕಾರ್ಯಗಾರಗಳಲ್ಲಿ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಿ ಉಪನ್ಯಾಸ, ಚರ್ಚೆ, ಸಂವಾದ ನಡೆಸಿರುವರು, ೨೦೦೫ರಲ್ಲಿ ಭಾರತ ಸರ್ಕಾರದಡಿಯಲ್ಲಿ ರಾಯಬಾಗ ತಾಲೂಕಿನ ಹಸ್ತಪ್ರತಿ ಸರ್ವೇಕ್ಷಣ ಕಾರ್ಯ ಕೈಗೊಂಡು ೧೫೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಶೋಧಿಸಿ ಯಶಸ್ವಿಯಾಗಿದ್ದಾರೆ. ಅನೇಕ ಪುನಶ್ಚೇತನ ಶಿಬಿರಗಳಲ್ಲಿ ಭಾಗವಹಿಸಿ ತಮ್ಮ ಜ್ಞಾನಮಟ್ಟವನ್ನು ಹೆಚ್ಚಿಸಿಕೊಂಡಿದ್ದಾರೆ.

## ಆರ್.ಬಿ.ಚಿಲಮಿ ಅವರ ವ್ಯಕ್ತಿತ್ವ

ಚಿಲಮಿಯವರು ತಾವು ಕಾರ್ಯ ನಿರ್ವಹಿಸುತ್ತಿರುವ ಪದವಿ ಮಹಾವಿದ್ಯಾಲಯವೇ ದೇವಸ್ಥಾನ, ವಿದ್ಯೆಯನ್ನು ಅರಸಿಬರುವ ವಿದ್ಯಾರ್ಥಿಗಳ ಮನಸ್ಸನ್ನು ತಲುಪಿ, ಅವರ ಬೌದ್ಧಿಕ ಮಟ್ಟ ಸುಧಾರಿಸುವಂತೆ ಪಾಠ ಭೋದಿಸುವುದು. ತಮ್ಮ ಕರ್ತವ್ಯ ಎಂದು ಬಾವಿಸಿ, ಸತತ ಅಭ್ಯಾಸ ಮಾಡಿ ಪ್ರಮಾಣಿಕತೆಯಿಂದ ಪಾಠ ಭೋಧಿಸುತ್ತಿರುವ, ಇವರು ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಅಧ್ಯಾಪಕರಾಗಿ ಹೆಸರುಗಳಿಸಿದ್ದಾರೆ. ಯಾವುದೇ ಅಹಂ ತೋರದೆ ಬದುಕಿನುದ್ದಕ್ಕೂ ಸರಳತೆಯನ್ನು ಮೈಗೂಡಿಸಿಕೊಂಡಿರುವರು, ಸಹನೆ, ನಿಷ್ಠೆ ಪ್ರಮಾಣಿಕತೆ, ಶ್ರದ್ಧೆ, ಅವರ ಬದುಕಿನ ಅವಿಭಾಜ್ಯ ಅಂಗಗಳಾಗಿವೆ. ತರಗತಿಯಲ್ಲಿ ಶಿಸ್ತು ಮತ್ತು ಶಾಂತಿಯನ್ನು ಕಾಯ್ದುಕೊಂಡು ಸಮಯ ನಿಷ್ಠೆಯನ್ನು ಸದಾ ಪಾಲಿಸಿಕೊಂಡು ಬಂದಿರುವರು. ಹಿರಿಯರಿರಲಿ, ಕಿರಿಯರಿರಲಿ ಅವರಿಗೆ ಸಲ್ಲಬೇಕಾದ ಗೌರವ ಕೊಡುವುದನ್ನು ಚಿಲಮಿಯವರು ಮರೆಯುವುದಿಲ್ಲ. ತಾವು ಹಿಡಿದ ಕೆಲಸವನ್ನು ತುಂಬಾ ಅಚ್ಚುಕಟ್ಟುತನದಿಂದ ಯಾರ ಹಂಗಿಗೂ ಒಳಗಾಗದೆ ಮಾಡಿ ಮುಗಿಸುತ್ತಾರೆ. ಎಂದಿಗೂ ಯಾರಿಗೂ ಕೇಡು ಬಯಸುವವರಲ್ಲ. ತಮ್ಮನ್ನು ನಿಂದಿಸಿದವರನ್ನು ಬಹು ಆತ್ಮೀಯತೆಯಿಂದ ಕಾಣುವ ದೊಡ್ಡ ಗುಣ ಅವರಲ್ಲಿದೆ. ಮೃದು ಮತ್ತು ಸೌಮ್ಯ ಸ್ವಾಭಾವದ ಚಿಲಮಿಯವರು ತಮ್ಮ ಸಿದ್ಧಾಂತದಲ್ಲಿ ಎಂದೂ ಯಾರೊಂದಿಗೂ ರಾಜಿಯಾಗದೆ, ತಮ್ಮ ನೆಲೆಯಲ್ಲಿ ಮುನ್ನಡೆದವರು ವಿದ್ಯಾರ್ಥಿಗಳ ಸರ್ವಾಂಗೀಣ ಪ್ರಗತಿಯೇ ತಮ್ಮ ಬದುಕಿನ ಉಸಿರು ಎಂದು ನಂಬಿದವರಾಗಿದ್ದಾರೆ.

## ಸೃಜನಶೀಲ ಬರಹಗಾರರಾಗಿ ಚಿಲಮಿ

ಸಾಹಿತ್ಯದಲ್ಲಿ ತೀವ್ರ ಆಸಕ್ತಿಯನ್ನು ಹೊಂದಿರುವ ಆರ್.ಬಿ.ಚಿಲಮಿಯವರು ತಮ್ಮ ಕರ್ತವ್ಯದ ಸಂಕಷ್ಟಗಳ ನಡುವೆ ಬರವಣಿಗೆ ಆರಂಭಿಸಿದ್ದು ೧೯೯೦ರ ದಶಕದಿಂದೀಚೆಗೆ ಪದವಿ ಕಾಲೇಜಿನ ಪೂರ್ಣ ಪ್ರಮಾಣದ ಅಧ್ಯಾಪಕರಾಗಿ ನೇಮಕಗೊಂಡ ಮೇಲೆ

ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದರು. ಆಗ ಆ ಪರಿಸರದ ಸುತ್ತಮುತ್ತ ನಡೆಯುತ್ತಿದ್ದ ಕವಿಗೋಷ್ಠಿ, ಸಾಹಿತ್ಯಿಕ ಚರ್ಚೆ, ವಿಚಾರ ಸಂಕಿರಣಗಳಲ್ಲಿ ಪಾಲ್ಗೊಂಡು ಆ ಕುರಿತು ಚಿಂತಿಸಿ ಸಾಹಿತ್ಯದ ಗೀಳು ಅಂಟಿಸಿಕೊಂಡು ಬರವಣಿಗೆ ಆರಂಭಿಸಿದರು. ತಮ್ಮ ಬದುಕಿನಲ್ಲಿ ಘಟಿಸಿದ ಘಟನೆಗಳನ್ನು ಅನುಭವಿಸಿದ ನೋವುಗಳನ್ನು ಬರವಣಿಗೆಗೆ ಇಳಿಸಿ ಕವನ ಬರೆದರು. ಬರುಬರುತ್ತ ಸಾಹಿತ್ಯದ ಗೀಳು ಹೆಚ್ಚಿ ಇವರ ಮನಸ್ಸಿನ ಮೇಲೆ ಗಾಢವಾಗಿ ಪ್ರಭಾವ ಬೀರಿದ ಶಿವಶರಣರ ಬದುಕು ಮತ್ತು ಸಾಧನೆಯನ್ನು ಕುರಿತು ಲೇಖನಗಳನ್ನು ಬರೆದು ಹತ್ತಾರು ಕಡೆ ರಾಜ್ಯ ಮತ್ತು ರಾಷ್ಟ್ರಮಟ್ಟದ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ ಪ್ರಬಂಧ ಮಂಡಿಸಿ, ವಿದ್ವಾಂಸರ ಗಮನ ಸೆಳೆದವರು. ಹೀಗೆ ೬೫ಕ್ಕೂ ಹೆಚ್ಚು ಲೇಖನಗಳು ನಾಡಿನ ಪ್ರಸಿದ್ಧ ಸಾಹಿತ್ಯ ಪತ್ರಿಕೆಗಳಾದ ಬಸವ ಪಥ, ಬಸವ ಬೆಳಗು, ಸ್ವಪ್ನಲೋಕ, ಸುಕುಮಾರ, ಕುರುಕ್ಷೇತ್ರ, ಸಿದ್ದಗಂಗಾ, ಸಂಕ್ರಮಣ, ಸ್ನೇಹಜೀವಿ, ನ್ಯಾಯಕ್ಕಾಗಿ ನಾನು, ಶರಣಚೇತನ, ಭಾಗತಿ ಸಂದೇಶ ಹೀಗೆ ಹತ್ತು ಹಲವು ಪತ್ರಿಕೆಗಳಲ್ಲಿ ಪ್ರಕಟಗೊಂಡು ನಾಡಿನ ಸಾಹಿತ್ಯಾಸಕ್ತರ ಕಣ್ಮನ ಸೆಳೆದು ಕುತೂಹಲ ಕೆರಳಿಸಿವೆ. ಅಲ್ಲದೆ ಜನಪದ ಸಾಹಿತ್ಯದಲ್ಲಿ ವಿಶೇಷ ಆಸಕ್ತಿ ಬೆಳೆಸಿಕೊಂಡ ಆರ್.ಬಿ.ಚಿಲಮಿಯವರು ಜಾನಪದ ಸಾಹಿತ್ಯವನ್ನು ವಿವಿಧ ಆಯಾಮಗಳಲ್ಲಿ ಅಧ್ಯಯನಕ್ಕೊಳಪಡಿಸಿ ಎಂಟು ಲೇಖನಗಳನ್ನು ಬರೆದು, ಅವುಗಳನ್ನು ಸಂಕಲಿಸಿ **'ಜಾನಪದ ಸಿರಿ'** ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ. ತಮ್ಮ ಬದುಕಿನ ಘಟನೆಗಳನ್ನು ಪ್ರಸಕ್ತ ವಿಧ್ಯಮಾನದ ಸಮಸ್ಯೆಗಳನ್ನು ವಸ್ತುವಾಗಿಸಿಕೊಂಡು ೨೦೨ ಆಧುನಿಕ ವಚನಗಳನ್ನು ರಚಿಸಿ ಅವುಗಳನ್ನು ಸಂಕಲಿಸಿ **'ವಚನ ವೃಷಭ'** ಎಂಬ ಹೆಸರಿನಿಂದ ಪ್ರಕಟಿಸಿರುವರು ಆಗಾಗ ಬಿಡುವಿನ ವೇಳೆಯಲ್ಲಿ ಬರೆದ ೩೨ ಕವನಗಳನ್ನು ಒಂದು ಕಡೆ ಸೇರಿಸಿ **'ಬತ್ತೀಸ ರಾಗ'** ಎಂಬ ಹೆಸರಿನಿಂದ ಪ್ರಕಟಿಸಿದ್ದಾರೆ. ಅಲ್ಲದೆ ಇವರ ಬದುಕಿನ ಮಹತ್ವಕಾಂಕ್ಷೆ ಸಂಶೋಧನಾ ಗ್ರಂಥವಾದ **'ಬ.ಗಿ.ಯಲ್ಲಟ್ಟಿ: ಸಮಗ್ರ ಸಾಹಿತ್ಯ'** ಪಿಎಚ್.ಡಿ., ಮಹಾಪ್ರಬಂಧವನ್ನು ಪ್ರಕಟಿಸಿದ್ದಾರೆ ಮತ್ತು ಗ್ರಂಥಸಂಪಾದಕರಾಗಿ **'ಅಲಭೈರಿ ಕವಿಯ ಭಜನೆ ಪದಗಳು'** ಮತ್ತು **'ಡೊಳ್ಳಿನ ಹಾಡುಗಳು'** ಎಂಬೆರಡು ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಇವುಗಳಲ್ಲದೆ ಇವರು ಬರೆದ ಹತ್ತಾರು ಕೃತಿಗಳು ಪ್ರಕಟಣೆಗೆ ಸಿದ್ದವಾಗಿವೆ.

ಒಟ್ಟಾರೆಯಾಗಿ ಹೇಳುವುದಾದರೆ ಸಾಹಿತಿ ಆರ್.ಬಿ.ಚಿಲಮಿಯವರು ಬದುಕಿನಲ್ಲಿ ಕಂಡ ಅನೇಕ ಏಳು ಬೀಳುಗಳನ್ನು ಎದುರಿಸಿ ಸ್ವಪರಿಶ್ರಮ ಮತ್ತು ಸತತ ಅಧ್ಯಯನದಿಂದ ಬದುಕಿನಲ್ಲಿ ಮೇಲೆ ಬಂದವರು. ಸಾಹಿತ್ಯ, ಸಂಶೋಧನೆ, ಗ್ರಂಥಸಂಪಾದನೆಯ ಬಗ್ಗೆ ಅವರಿಗಿರುವ ಉತ್ಸಾಹದ ಚಿಲುಮೆ ಮೆಚ್ಚುವಂಥದ್ದು. ಅರವತ್ತರ ಇಳಿ ವಯಸ್ಸಿನಲ್ಲೂ ಇನ್ನೂ ಹತ್ತಾರು ಸಾಹಿತ್ಯ ಕೃತಿಗಳನ್ನು ಬರೆಯಬೇಕೆಂಬ ಉತ್ಕಟ ಆಕಾಂಕ್ಷೆ ಹೊಂದಿದ್ದಾರೆ. ಇವರಿಗಿರುವ ಸಾಹಿತ್ಯಾಸಕ್ತಿಯು ಸಾಹಿತ್ಯ ಪ್ರತಿಭೆಗಳನ್ನು ಹುರಿದುಂಬಿಸುವಂತಿವೆ.

# ಅಧ್ಯಾಯ-ಮೂರು

## ಆರ್.ಬಿ.ಚಿಲಮಿ ಅವರ ಸಾಹಿತ್ಯ ಸ್ಥೂಲ ನೋಟ

ಆರ್.ಬಿ.ಚಿಲಮಿಯವರು ಕೆಲ ಸಾಹಿತ್ಯ ಪ್ರಕಾರಗಳ ಆಳಕ್ಕಿಳಿದು, ಅಭ್ಯಸಿಸಿ ಸಹೃದಯರಿಗೂ ರಸಸ್ವಾದ ಮೂಡಿಸಿದ ಸಾಹಿತಿ. ಚಿಲಮಿಯವರು, ಕಾವ್ಯ, ಆಧುನಿಕ ವಚನ, ಜೀವನ ಚರಿತ್ರೆ, ಸಂಶೋಧನಾ ಲೇಖನಗಳು, ಜಾನಪದ ಸಾಹಿತ್ಯ, ಸಂಪಾದಿತ ಕೃತಿಗಳು ಹೀಗೆ ಅವರ ಅಭಿರುಚಿಗೆ ತಕ್ಕ ಸಾಹಿತ್ಯ ಕೃತಿಗಳನ್ನು ರಚನೆ ಮಾಡಿರುವರು. ಇವರ ಸಾಹಿತ್ಯವು ಮಹತ್ವ ಪೂರ್ಣವಾದ ಅಂಶಗಳನ್ನೊಳಗೊಂಡಿದೆ. ಆದ್ದರಿಂದ ಚಿಲಮಿ ಅವರ ಸಾಹಿತ್ಯದ ಸ್ಥೂಲ ನೋಟವನ್ನು ಪ್ರಸ್ತುತ ಅಧ್ಯಾಯದಲ್ಲಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

**ಬತ್ತೀಸ ರಾಗ**

'ಬತ್ತೀಸರಾಗ' ಹೆಸರೇ ಸೂಚಿಸುವಂತೆ ಈ ಕವನ ಸಂಕಲನವು ೩೨ ಕವಿತೆಗಳನ್ನು ಒಳಗೊಂಡಿದೆ. ಹಾರೂಗೇರಿಯ ಶ್ರೀ ವೀರಭದ್ರೇಶ್ವರ ಪ್ರಕಾಶನದಿಂದ ೨೦೦೭ರಲ್ಲಿ ಪ್ರಕಟವಾಗಿದೆ. ಕವಿಯೊಬ್ಬನ ಉದಾತ್ತ ಆಶಯಗಳು ಕವಿತೆಗಳಾಗಿ ಮೂಡುವ ತವಕದಲ್ಲಿ 'ಬತ್ತೀಸರಾಗ' ಸಂಕಲಿತವಾಗಿದೆ. ಆಯಾ ರಾಗಗಳು ತಮ್ಮಷ್ಟಕ್ಕೆ ವಿಭಿನ್ನವಾಗಿರುವಂತೆ ಕವಿತೆಗಳ ವಸ್ತು ಪ್ರತಿರೂಪಗಳು ವಿಭಿನ್ನವಾಗಿವೆ. ಕವಿ ಚಿಲಮಿ ತಮ್ಮ ಸುತ್ತಲಿನ ಬದುಕನ್ನು ಪ್ರಕೃತಿಯನ್ನು ಮುಗ್ಧ ಕಣ್ಣು ಹಾಗೂ ಮನಸ್ಸುಗಳಿಂದ ಗ್ರಹಿಸುತ್ತಾ, ಮಾತಿನ ಲಯವನ್ನು ಹುಡುಕುತ್ತಾ, ದಾಖಲಿಸುವ ಪ್ರಯತ್ನ ಮಾಡಿದ್ದಾರೆ. ಕನ್ನಡ ಭಾಷೆ ಹಾಗೂ ಸಾಹಿತ್ಯದ ಪ್ರಾಧ್ಯಾಪಕರಾಗಿರುವ ಅವರು ಹಳಗನ್ನಡ ನಡುಗನ್ನಡದ ಪ್ರಭಾವಲಯದಲ್ಲೇ ಸೊಗಲದ ಸೌಂದರ್ಯವನ್ನು ಚಿತ್ರಿಸುವ ಬಗೆಯನ್ನು ಇಲ್ಲಿ ಗಮನಿಸಬಹುದು.

"ನಭೋ ಮಂಡಲವನೇ ಚುಂಬಿಸುವ
ಉತ್ತುಂಗ ಪರ್ವತ ಶ್ರೇಣಿಯಲಿ

ಪವಡಿಸಿಹನು ಸೋಮೇಶ್ವರದೇವನು!
ಏನಗ್ಗಳವೋ ಆ ತಾಣದ ಸೊಗಸು!
ಸೊಗಲ ದೇವನ ರಂಗಮಂಟಪ ಗರ್ಭಮಂದಿರವು
ಜಕಣಾಚಾರ್ಯ ನಿರ್ಮಿಸಿದ ಕಲಾ–ಕುಸುರಿನಾ
ಬೇಲೂರು ಹಳೆಬೀಡು ನೆನಪಿಸುವ ಭವ್ಯ ಮಂದಿರವು"[೧]

ಚಿಲಮಿ ಅವರ ಒಟ್ಟಾರೆ ಕವಿತೆಗಳನ್ನೂ ನೋಡಿದರೆ ಕಾವ್ಯ ಕ್ಷೇತ್ರದಲ್ಲಿ ಪ್ರಗತಿ ಪಥದತ್ತಾ ಮುನ್ನಡೆಯುತ್ತಿದ್ದಾರೆ. 'ಬತ್ತೀಸರಾಗ' ಕವನ ಸಂಕಲನದಲ್ಲಿ ಸತ್ಪುರುಷ ಶಿವಯೋಗಿಗಳನ್ನು ಹಾಗೂ ಪುಣ್ಯ ಕ್ಷೇತ್ರಗಳನ್ನು ಕುರಿತು ಬರೆದ ಕವಿತೆಗಳು ಅಧಿಕವಾಗಿದ್ದು, ಸಾಮಾಜಿಕ ಜೀವನದ ವಿವಿಧ ಮುಖಗಳಿಗೆ ಸ್ಪಂದಿಸುವ ಕವಿತೆಗಳು ಇಲ್ಲಿ ಕಂಡುಬರುತ್ತವೆ.

"ಮಳೆ ತೀರ್ಥವಾಗತೈತಿ, ಬೆಳೆ ಪ್ರಸಾದವಾಗತೈತಿ
ಈ ಕಾಲದಾಗ ಪುಡಾರಿತನದಿಂದ ಪುಡಾರಿಕಸ
ಹಸಿರಾಗಿ ಕುಸುರಾಗಿ ಹುಲುಸಾಗಿ ಬೆಳೆದ ನಿಲ್ಲತೈತಿ"[೨]

'ಪುಡಾರಿ' ಎಂಬ ಕವನದಲ್ಲಿ ಮಳೆ ಜೀವರಾಶಿಗೆ ಕೊಟ್ಟ ಕೊಡುಗೆ, ಅದರಿಂದ ಬೆಳೆದ ಆಹಾರ ಧಾನ್ಯ ಹಣ್ಣು ಹಂಪಲಗಳಿಂದ ಜೀವ ಕುಲವೆಲ್ಲಾ ಬದುಕಲು ದಾರಿಯಾಗಬಲ್ಲದು. ದೇವರು ಹೀಗೆ ಉಪಕಾರಿಯಾದರೆ, ಮನುಷ್ಯ ಉಪಕಾರಗೇಡಿಯಾಗುತ್ತಿದ್ದಾನೆ. ಅಧಿಕಾರಮದ, ಧನಮದ ಅವನಲ್ಲಿ ಪುಢಾರಿ ಕಸವಾಗಿ ಬೆಳೆಯುತ್ತದೆ. ಆ ಕಸವನ್ನು ಮುಟ್ಟಿದರೆ ಅಪಾಯ, ಮಾರಕ, ಇಂಥ ಧ್ವನಿ ಈ ಕವನದಲ್ಲಿ ಪರಿಣಾಮಕಾರಿಯಾಗಿ ಮೂಡಿಬಂದಿದೆ.

ಒಟ್ಟಾರೆಯಾಗಿ ಕವಿ ಚಿಲಮಿಯವರ 'ಬತ್ತೀಸ ರಾಗ'ಕವನ ಸಂಕಲನವು ಮಾನವ ಸಹಜ ಬದುಕಿನ ಅಂಶಗಳನ್ನು ಎತ್ತಿ ಹಿಡಿದಿದೆ. ಸಾಹಿತ್ಯದ ದೃಷ್ಟಿಯಿಂದ ಇವರ ಕವಿತೆಗಳಲ್ಲಿ ಛಂದಸ್ಸಿನ ಅಂಶಗಳು ಹೆಚ್ಚು ಬಳಕೆಯಾಗಿಲ್ಲ. ಇಲ್ಲಿನ ಕವಿತೆಗಳು ಗದ್ಯದಂತೆ ಕಂಡರೂ, ಬದುಕಿನ ನೇರ ನಿರೂಪಣೆಯನ್ನು ಹೊಂದಿವೆ. ಅಲ್ಲದೆ ಇವರು ಕವನಗಳಲ್ಲಿ ಬಳಸಿರುವ ಬೆಳಗಾವಿ ಪರಿಸರದ ಭಾಷೆ ಕಾವ್ಯಕ್ಕೆ ಸೌಂದರ್ಯವನ್ನು ಒದಗಿಸಿದೆ. (ಈ ಕಾವ್ಯ ಕುರಿತು ಅಧ್ಯಾಯ ೬ರಲ್ಲಿ ವಿವೇಚನೆ ಮಾಡಲಾಗಿದೆ)

**ಅಪ್ಪ–ಅವ್ವ ಮತ್ತು ನಾನು: (ಅಪ್ರಕಟಿತ)**

ಚಿಲಮಿ ಅವರು ಬಿಡುವಿನ ವೇಳೆಯಲ್ಲಿ ಕವನ ರಚಿಸಿ ಪತ್ರಿಕೆಗಳಲ್ಲಿ ಪ್ರಕಟಿಸಿದ ಕವನಗಳನ್ನು ಈ ಕವನಸಂಕಲನದಲ್ಲಿ ಹಿಡಿದಿಟ್ಟಿದ್ದಾರೆ. ಇದರಲ್ಲಿ ಮುಖವಾಡಗಳು, ಗಂಗೋತ್ರಿಯ ನೆನಪು, ಪುಟ್ಟಹಕ್ಕಿ ಮತ್ತು ನಾನು. ಕನ್ನಡ ಡಿಂಡಿಮ, ಹತ್ಯಾಕಾಂಡ, ಹೆಣ್ಣು ಹೀಗೆ ೨೮ ಕವಿತೆಗಳನ್ನು ಒಳಗೊಂಡು ಹಾರೂಗೇರಿಯ ಶ್ರೀ ವೀರಭದ್ರೇಶ್ವರ ಪ್ರಕಾಶನ ಅಡಿಯಲ್ಲಿ ಪ್ರಕಟವಾಗಲು ಸಿದ್ಧವಾಗುತ್ತಿದೆ.

**ವಚನ ವೃಷಭ (ಅಪ್ರಕಟಿತ)**

ಚಿಲಮಿಯವರು ಕಾವ್ಯಗಳನಷ್ಟೇ ಅಲ್ಲದೆ, ಆಧುನಿಕ ವಚನಗಳನ್ನು ರಚನೆ ಮಾಡಿದ್ದಾರೆ. 'ವಚನ ವೃಷಭ' ಎಂಬ ವಚನ ಸಂಕಲನದಲ್ಲಿ ೨೦೨ ವಚನಗಳನ್ನು ಸಂಕಲಿಸಲಾಗಿದೆ. ಇದರಲ್ಲಿಯ ಮೊದಲ ಆರು ವಚನಗಳು ಶ್ರೀ ಸದ್ಗುರು ವೃಷಭೇಂದ್ರರ ಸ್ತುತಿ ಕಂಡುಬರುತ್ತದೆ. ಒಂದರ್ಥದಲ್ಲಿ ಶ್ರೀ ವೃಷಭೇಂದ್ರರೇ ಈ ಕೃತಿಯ ಆದಿದೈವ. ಚಿಲಮಿಯುವರು ಇವರ ಹೆಸರಿನಲ್ಲಿಯೇ ಅಂಕಿತ ಹಾಕಿರುವರು. ಇಲ್ಲಿಯ ಕೆಲವು ವಚನಗಳು ನಿಶ್ಚಿತವಾಗಿಯೂ, ಸೊಗಸಾಗಿಯೂ ಕಂಡುಬರುತ್ತದೆ. ಆದರೆ ಅವು ಚಿಲಮಿಯವರು ಅಪೇಕ್ಷಿಸುವಂತೆ ಅಧ್ಯಾತ್ಮಿಕ ವಿಷಯವನ್ನು, ಪ್ರಾಪಂಚಿಕ ಚಿತ್ರಿಗಳನ್ನು ಪ್ರಸ್ತುತ ಪಡಿಸುತ್ತವೆ. ಈ ವಚನ ಸಂಕಲನವು ಹಾರೂಗೇರಿಯ ಶ್ರೀ ವೀರಭದ್ರೇಶ್ವರ ಪ್ರಕಾಶನ ಅಡಿಯಲ್ಲಿ ಪ್ರಕಟವಾಗಲು ಸಿದ್ಧವಾಗುತ್ತಿದೆ.

**ಬ.ಗಿ.ಯಲ್ಲಟ್ಟಿ : ಸಮಗ್ರ ಸಾಹಿತ್ಯ**

ನವೋದಯ ಸಾಹಿತ್ಯ ಪರಂಪರೆಯ ಸಾಲು ಮರಗಳ ನೆರಳಿನಲ್ಲಿ ಸಾಗಿ ಬಂದಿರುವ, ಸುಮಧುರ ಕವಿಯೆಂದೇ ಗುರುತಿಸಿಕೊಂಡಿದ್ದ ಬ.ಗಿ.ಯಲ್ಲಟ್ಟಿ ಅವರ ಜೀವನ ಮತ್ತು ಸಾಹಿತ್ಯವನ್ನು ಕುರಿತು ಸಮಗ್ರವಾದ ಅಧ್ಯಯನವೇ ಬ.ಗಿ.ಯಲ್ಲಟ್ಟಿ : ಸಮಗ್ರ ಸಾಹಿತ್ಯ ಎಂಬ ಸಂಶೋಧನಾತ್ಮಕ ಕೃತಿಯಾಗಿದೆ. ಚಿಲಮಿಯವರು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ೨೦೦೪ರಲ್ಲಿ ಸಾದರ ಪಡಿಸಿದ ಪಿಎಚ್.ಡಿ. ಮಹಾಪ್ರಬಂಧವಿದು. ಅವರ ಈ ಸಂಶೋಧನೆಗೆ ಡಾ.ವ್ಹಿ.ಎಸ್.ಮಾಳಿಯವರ ಸಮರ್ಥ ಮಾರ್ಗದರ್ಶನವಿದೆ. ೨೦೦೭ರಲ್ಲಿ ಈ ಮಹಾಪ್ರಬಂಧ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. (ಈ ಕೃತಿ ಕುರಿತು ಅಧ್ಯಾಯ ನಾಲ್ಕರಲ್ಲಿ ವಿವೇಚನೆ ಮಾಡಲಾಗಿದೆ.)

**ಜನಪದ ಸಿರಿ**

ಜನಪದ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಈ ಕೃತಿಯು ಹಾರೂಗೇರಿಯ ಶ್ರೀ ವೀರಭದ್ರೇಶ್ವರ ಪ್ರಕಾಶನ ಸಂಸ್ಥೆಯಿಂದ ೨೦೦೮ರಲ್ಲಿ ಪ್ರಕಟವಾಗಿದೆ. ಈ ಕೃತಿಯಲ್ಲಿ ಜನಪದಕ್ಕೆ ಸಂಬಂಧಿಸಿದಂತೆ ಎಂಟು ಲೇಖನಗಳಿವೆ. ಈ ಗ್ರಂಥಕ್ಕೆ ಡಾ.ವೀರಣ್ಣ ದಂಡೆಯವರು ಮುನ್ನುಡಿ ಬರೆದಿದ್ದಾರೆ. ಜನಪದ ಸಾಹಿತ್ಯದಲ್ಲಿ ಬಸವಾದಿಶರಣರ ಸ್ತುತಿ, ಒಗಟುಗಳ ವೈಶಿಷ್ಠ, ಜನಪದ ಗಾದೆಗಳು, ಡೊಳ್ಳಿನ ಹಾಡುಗಳು ಹಾಗೂ ಜನಪದ ಗೀತೆಗಳಲ್ಲಿ ಹಾಸ್ಯ ಪ್ರಜ್ಞೆ ಇನ್ನು ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಲೇಖಕ ಚಿಲಮಿಯವರು ಚರ್ಚಿಸಿದ್ದಾರೆ. ಜಾನಪದ ಅಧ್ಯಯನಕಾರರಿಗೆ ಇದೊಂದು ಆಕರ ಗ್ರಂಥವಾಗಬಲ್ಲದು.

**ಜೀವನ ಚರಿತ್ರೆಗಳು:**

ಚಿಲಮಿಯವರು ಸಾಧಕ ವ್ಯಕ್ತಿಯ ಬದುಕನ್ನು ಕುರಿತು ಜೀವನ ಚರಿತ್ರೆಗಳನ್ನು ರಚಿಸಿದ್ದಾರೆ. ಅವುಗಳೆಂದರೆ ಕುಳ್ಳೂರು ಕಲ್ಮಠದ ಶಿವಯೋಗಿಗಳ ಚರಿತ್ರೆ, ಕುಳ್ಳೂರು ಕಲ್ಮಠದ ರೇವಯ್ಯನವರ ಚರಿತ್ರೆ, ಕುಳ್ಳೂರು ಕಲ್ಮಠದ ಸಿದ್ಧರಾಮೇಶ್ವರ ಚರಿತ್ರೆ. ಇವುಗಳು ಹಾರೂಗೇರಿಯ ಶ್ರೀ ವೀರಭದ್ರೇಶ್ವರ ಪ್ರಕಾಶನ ಸಂಸ್ಥೆಯಿಂದ ೨೦೦೮ರಲ್ಲಿ ಪ್ರಕಟಗೊಂಡಿವೆ. ಈ ಜೀವನ ಚರಿತ್ರೆಗಳಿಗೆ ಮುನ್ನುಡಿಯನ್ನು ಕುಳ್ಳೂರು ಕಲ್ಮಠದ ಶ್ರೀ ಸದ್ಗುರು ಶಿವಯ್ಯ ಸ್ವಾಮಿಗಳು ಬರೆದಿದ್ದಾರೆ. ಈ ಮೂರು ಜೀವನ ಚರಿತ್ರೆಗಳು ಕುಳ್ಳೂರು ಕಲ್ಮಠದ ಪೀಠವನ್ನೇರಿದ ಶಿವಯೋಗಿಗಳು. ರೇವಯ್ಯನವರು ಮತ್ತು ಸಿದ್ಧರಾಮೇಶ್ವರ ಸ್ವಾಮಿಗಳು ಬದುಕಿನಲ್ಲಿ ಭಕ್ತರ ಉದ್ದಾರಕ್ಕಾಗಿ ಮಾಡಿದ ಸಮಾಜೋಪಯೋಗಿ ಕಾರ್ಯಗಳು, ಅದಕ್ಕಾಗಿ ಕೈಗೊಂಡ ವ್ರತಗಳು, ಸ್ಥಾಪಿಸಿದ ಶೈಕ್ಷಣಿಕ ಸಂಸ್ಥೆಗಳು ಮುಂತಾದ ಅವರ ಬದುಕಿನ ಘಟನೆಗಳನ್ನು ವಸ್ತುನಿಷ್ಠವಾಗಿ ವಿವರಿಸಿದ್ದಾರೆ. ಅಲ್ಲದೆ ಈ ಸ್ವಾಮಿಗಳನ್ನು ಪವಾಡ ಪುರುಷರಂತೆ ಚಿತ್ರಿಸಿರುವುದು ಈ ಕೃತಿಗಳಿಂದ ವ್ಯಕ್ತವಾಗುತ್ತದೆ.

**ಕುರುಹಿನಶೆಟ್ಟಿ ಸಮುದಾಯ: ಒಂದು ಜನಾಂಗಿಕ ಅಧ್ಯಯನ : (ಅಪ್ರಕಟಿತ)**

ಇದು ಚಿಲಮಿಯವರ ಸಂಶೋಧನಾ ಕೃತಿಯಾಗಿದೆ. ಹತ್ತು ಅಧ್ಯಾಯಗಳನ್ನು ಒಳಗೊಂಡಿರುವ ಈ ಗ್ರಂಥವು ವೀರಶೈವ ಒಳಪಂಗಡಗಳಲ್ಲೊಂದಾದ ಕುರುಹಿನಶೆಟ್ಟಿ ಸಮುದಾಯ ಕುರಿತದ್ದಾಗಿದೆ. ಇದರಲ್ಲಿ ಕುರುಹಿನಶೆಟ್ಟಿ ಸಮಾಜದ ಪ್ರಾಚೀನತೆ, ಹುಟ್ಟು, ವಿಕಾಸ, ಚಾರಿತ್ರಿಕ ಹಿನ್ನೆಲೆ, ಪರಂಪರೆ, ಜನಾಂಗದ ಶಿವಶರಣರು, ಸಂಸ್ಕೃತಿ, ಆಚರಣೆ, ಸಂಸ್ಕಾರ ಮುಂತಾದ ಅಂಶಗಳನ್ನು ಒಳಗೊಂಡಿದೆ. ಅಲ್ಲದೆ ಈ ಸಮಾಜದ ಧರ್ಮ ಪೀಠವಾದ ವೀರಭಿಕ್ಷಾವೃತ್ತಿ ನೀಲಕಂಠಮಠದ ಗುರುಪರಂಪರೆ, ಐತಿಹಾಸಿಕ ಹಿನ್ನೆಲೆ ಶ್ರೀ ಮಠದ ಬೆಳವಣಿಗೆ ವೀರಶೈವ ಮಠಗಳಲ್ಲಿ ಇದರ ಸ್ಥಾನಮಾನ ಕುರಿತು ಚರ್ಚಿಸಿದ್ದಾರೆ. ಮತ್ತು ಪ್ರಸ್ತುತ ಸಂದರ್ಭದಲ್ಲಿ ಕುರುಹಿನಶೆಟ್ಟಿ ಸಮುದಾಯದ ಸ್ಥಿತಿ–ಗತಿ ಕುರಿತು ವಿವರಿಸಿದ್ದಾರೆ.

**ಸಣ್ಣಕಥೆ:**

'ಪ್ರಾಮಾಣಿಕತೆ : ಇದು ಚಿಲಮಿಯವರು ಬರೆದ ಏಕೈಕ ಕಥೆಯಾಗಿದೆ. ೨೦೦೩ರಲ್ಲಿ ಹಾರಾಗೇರಿಯ 'ನ್ಯಾಯಕ್ಕಾಗಿ ನಾನು' ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಕೆಳವರ್ಗದ ಮುದಕಪ್ಪ ಈ ಕಥೆಯ ನಾಯಕ. ಈತ ಊರ ಶ್ರೀಮಂತ ರಂಗಪ್ಪನ ಮನೆಯಲ್ಲಿ ಜೀತದಾಳಾಗಿರುತ್ತಾನೆ. ಮುದಕಪ್ಪ, ರಂಗಪ್ಪನಿಗೆ ಅತ್ಯಂತ ವಿಶ್ವಾಸಿಗನಾಗಿದ್ದು, ಆತನ ಮನೆಯ

ಆಂತರಿಕ ವ್ಯವಹಾರವನ್ನು ನಿಷ್ಠೆಯಿಂದ ಮಾಡುವ ವ್ಯಕ್ತಿಯಾಗಿರುತ್ತಾನೆ. ಎಂತಹ ಸಂದರ್ಭ ಬಂದರೂ ತನ್ನ ನಿಷ್ಠೆ ಮತ್ತು ಪ್ರಾಮಾಣಿಕತೆ ಬಿಡುವುದಿಲ್ಲ. ಆತನ ಪ್ರಾಮಾಣಿಕತೆಯನ್ನು ಊರಿನ ಜನರು ಮತ್ತು ರಂಗಪ್ಪ ಮೆಚ್ಚಿ ಆಶ್ಚರ್ಯಪಟ್ಟು, ಈತನೇ ನಮಗೆಲ್ಲಾ ಮಾದರಿ ಎಂದು ಕೊಳ್ಳುತ್ತಾರೆ. ಎಂಟು ಪುಟಗಳಲ್ಲಿ ಎಣೆಯಲಾದ ಈ ಕಥೆ, ಕೆಳವರ್ಗದ ವ್ಯಕ್ತಿಯ ಬದುಕಿನ ಚಿತ್ರಣವನ್ನು ಯಥಾವತ್ತಾಗಿ ಲೇಖಕರು ಚಿತ್ರಿಸಿದ್ದಾರೆ. ಚಿಲಮಿಯವರು ಕಥೆ ರಚಿಸುವ ಸಾಮರ್ಥ್ಯ ಹೊಂದಿದ್ದಾರೆಂಬುದನ್ನು ಈ ಕಥೆಯಿಂದ ಅರಿಯಬಹುದು.

## ಗ್ರಂಥ ಸಂಪಾಧನೆ

ಗ್ರಂಥಗಳ ಸಂಪಾದನೆ ಮಾಡಿ ಪ್ರಕಟಿಸುವುದು ಬರಹಗಾರನಷ್ಟೇ ಜವಾಬ್ದಾರಿಯಳ್ಳದ್ದು. ಏಕೆಂದರೆ ಯಾವುದೇ ಕೃತಿಯನ್ನು ಪ್ರಕಟಿಸಲು ಪೂರ್ಣ ಪ್ರಮಾಣದಲ್ಲಿ ಓದುವುದು; ಅದಕ್ಕೆ ಮಹತ್ವವೆನಿಸುವ ರೀತಿಯಲ್ಲಿ ಪ್ರಾಸ್ತಾವನೆ ಮತ್ತು ವಿಷಯ ನಿರೂಪಣೆ ಬರುವುದು. ಸಂಪಾದಿತ ಕೃತಿಯ ವಿಷಯಗಳ ಚೌಕಟ್ಟು ನಿರ್ಮಿಸುವುದು, ಅಕ್ಷರದೋಷಗಳುಂಟಾಗದಂತೆ ಕಾಳಜಿವಹಿಸುವುದು, ಮೂಲ ಬಗಹದಲ್ಲಿ (ಹಸ್ತ ಪ್ರತಿಯಲ್ಲಿ) ಲೋಪ-ದೋಷಗಳುಂಟಾಗುತ್ತಿದ್ದರೆ. ಅವುಗಳನ್ನು ಸರಿಪಡಿಸುವುದು-ಈ ಅಂಶಗಳನ್ನು ಸಂಪಾದಕನಾದವನ ಆದ್ಯ ಕರ್ತವ್ಯವಾಗಿದೆ.

೧. ಚಿಲಮಿಯವರಿಂದ ಸಂಪಾದನೆಗೊಂಡ ಕೃತಿಗಳು ಒಟ್ಟು ನಾಲ್ಕು ಅವುಗಳಲ್ಲಿ 'ಕುರುಹು ಅರಿವು' ಎಂಬುದು ಸಹಾಯಕ ಸಂಪಾದಕನಾಗಿ ಕೆಲಸ ನಿರ್ವಸಿರುವುದನ್ನು ಅವರೇ ಹೇಳಿಕೊಂಡಿದ್ದಾರೆ. 'ಕುರುಹು-ಅರಿವು' ಪ್ರಸ್ತುತ ಸ್ಮರಣ ಸಂಚಿಕೆಯು ಕುರುಹಿನಶೆಟ್ಟಿ ಸಮಾಜದ ಕುಲಗುರುಗಳಾದ- ಶ್ರೀ ಶೈಲ ಸೂರ್ಯ ಸಿಂಹಾಸನಾಧೀಶ ಶ್ರೀ ೧೦೦೮ ಶ್ರೀ ನೀಲಕಂಠ ಪಟ್ಟಾಧ್ಯಕ್ಷರಾದ ಶ್ರೀಮದ್ ಜಗದ್ಗುರು ಶಂಕರ ಶಿವಾಚಾರ್ಯ ಮಹಾಸ್ವಾಮಿಗಳವರ ಪಟ್ಟಾಭಿಷೇಕ ಸುವರ್ಣ ಮಹೋತ್ಸವ ಸಮಾರಂಭದಲ್ಲಿ ಈ ಸ್ಮರಣ ಸಂಚಿಕೆ ಪ್ರಕಟವಾಗಿದೆ. ಇದರಲ್ಲಿರುವ ಒಟ್ಟು ಮೂವತ್ತೆರಡು ಲೇಖನಗಳಲ್ಲಿ 'ಕುರುಹಿನಶೆಟ್ಟಿ ಸಮಾಜದ ಸಂಘಟನೆಗಳು' ಎಂಬುದು ಉತ್ತಮವಾದ ಲೇಖನವು ಪ್ರಕಟಗೊಂಡಿದೆ. ಇನ್ನುಳಿದ ೩೧ ಲೇಖನಗಳು ಕುರುಹಿನಶೆಟ್ಟಿ ಜನಾಂಗದ ಮೂಲ-ಪರಂಪರೆ, ಗುರು-ಗುರುಪೀಠ, ಈ ಜನಾಂಗ ಚದುರಿ ಹೋಗಿ ನೆಲೆಸಿರುವ ಊರುಗಳು, ಶಾಖಾ ಮಠಗಳು, ರಾಜಕೀಯ ಪ್ರವೇಶ, ನೇಕಾರಿಕೆಯ ಉದ್ದಿಮೆಯ ಅಳಿವು-ಉಳಿವು- ಈ ಮುಂತಾದ ಚಿಂತನೆಯ ವೈಚಾರಿಕತೆಯ ಲೇಖನಗಳೂ ಇದರಲ್ಲಿವೆ ಪ.ಪೂ ಶ್ರೀ ಶಂಕರಶಿವಾಚಾರ್ಯ ಮಹಾಸ್ವಾಮಿಗಳ ಚರಿತ್ರೆಗೆ ಅವರ ಸೌಜನ್ಯ ಸ್ವಾಮಿತ್ವಕ್ಕೆ ಸಂಬಂಧಿಸಿದ ಕವಿತೆಗಳೂ ಇದರಲ್ಲಿ ಸೇರ್ಪಡೆಯಾಗಿವೆ.

**ಪ್ರಬಂಧ ಸಂಪದ**

ಪ್ರಸ್ತುತ ಪ್ರಬಂಧ ಸಂಪದವು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಬಿ.ಎ. ಭಾಗ-೧ರ ಆವಶ್ಯಕ ಪತ್ಯ (ಸೆಮಿಸ್ಟರ್ ೧ ಮತ್ತು ೨)ವನ್ನು ೨೦೦೫-೦೬ರಿಂದ ಆನಂತರ ಮೂರು ವರ್ಷಗಳವರೆಗೆ ನಿಗದಿಪಡಿಸಿದ ಕೃತಿ ಇದಾಗಿದೆ. ಇದನ್ನು ಡಾ.ಆರ್.ಬಿ.ಚಿಲಮಿ ಮತ್ತು ಪ್ರೊ.ಜಿ.ವ್ಹಿ.ಮಳಗಿಯವರ ಸಹಯೋಗದಲ್ಲಿ ರಚಿತಗೊಂಡು ಪ್ರಸಾರಾಂಗ, ಕ.ವಿ.ವಿ.ಧಾರವಾಡ ಇವರು ೨೦೦೫ರಲ್ಲಿ ಪ್ರಕಟಿಸಿರುವರು. ಈ ಪ್ರಬಂಧ ಸಂಪದದ ಸಂಕಲನಕ್ಕೆ ಡಾ.ಆರ್.ಬಿ.ಚಿಲಮಿಯವರು ೨೭ ಪುಟಗಳಷ್ಟು ಪ್ರಸ್ತಾವನೆ ಬರೆದಿದ್ದು, ಸಾರ್ಥಕವೆನ್ನುವಂತಿದೆ. ವಿದ್ಯಾರ್ಥಿಯಾಗಲಿ -ಬೋಧಕನಾಗಲಿ ಪ್ರಬಂಧ ಸಾಹಿತ್ಯದ ಕುರಿತು ಯಾವ ಪುಸ್ತಕವನ್ನೇ ನೋಡಬಾರದೆನ್ನುವ ರೀತಿಯಲ್ಲಿ ಪರಿಶ್ರಮಿಸಿ, ಅಧ್ಯಯನ ಮಾಡಿದ ಚಿಲಮಿಯವರು ಉತ್ತಮಾಂಶಗಳನ್ನು ನೀಡಿದ್ದಾರೆಂದು ಹೇಳಲು ಹೆಮ್ಮೆಯೆನಿಸುತ್ತದೆ ಪ್ರಬಂಧವೆಂದರೇನು, ಅದರ ಮೂಲವೇನು? ಎಲ್ಲಿಂದ ಬಂದಿತು, ಪ್ರಬಂಧದ ಲಕ್ಷಣವನ್ನು ಪಾಶ್ಚಾತ್ಯರು ಮತ್ತು ಭಾರತೀಯ ಹಾಗೂ ಕನ್ನಡಿಗರು ಹೇಳಿರುವ ಬಗೆಗಳಾವವು? ಪ್ರಬಂಧದ ಸಾಮಾನ್ಯ ಸ್ವರೂಪಗಳಾವವು? ಪ್ರಬಂಧದ ಪ್ರಕಾರಗಳಾವವು? ಪ್ರಬಂಧ ಸಾಹಿತ್ಯದ ಪರಂಪರೆ ನವೋದಯ ಕಾಲದಲ್ಲಿರುವ ಪ್ರಮುಖ ಕನ್ನಡದ ಶ್ರೇಷ್ಠ ಪ್ರಬಂಧಕಾರರು ಯಾರ್‍ಯಾರು? ಪ್ರಬಂಧ ಬರೆಯುವ ಪದ್ಧತಿಯಾವುದು? ಲಲಿತ-ವೈಚಾರಿಕ-ವಿನೋದಕ ಪ್ರಬಂಧಗಳಲ್ಲಿರುವ ವ್ಯತ್ಯಾಸಗಳೇನು- ಈ ಮುಂತಾದ ಚರ್ಚೆಗಳನ್ನು ಸುಸ್ಪಷ್ಟವಾಗಿ ಚಿಲಮಿಯವರು ಬಿಂಬಿಸಿದ್ದಾರೆ.

ಚಿಲಮಿಯವರ ಮೂರನೆಯ ಸಂಪಾದಿತ ಕೃತಿ ಹಾರೂಗೇರಿಯ **"ಅಲಭೈರಿ ಕವಿ ವಿರಚಿತ ಭಜನೆಯ (ತತ್ತ್ವ) ಪದಗಳು"** ಎಂಬುದಾಗಿದೆ. ಸ್ಥಳೀಯ ಲೀಲಾ ಮಠದ ಪವಾಡ ಪುರುಷನಾದ ಶ್ರೀ ಚೆನ್ನವೃಷಭೇಂದ್ರ ಸ್ವಾಮೀಜಿ ಪ್ರಕಾಶನದ ವತಿಯಿಂದ ೨೦೦೭ರಲ್ಲಿ; ಹಾರೂಗೇರಿಯ ಸರಸ್ವತಿ ಮುದ್ರಣಾಲಯದಿಂದ ಮುದ್ರಣಗೊಂಡ ಗ್ರಂಥವಿದು. ಆರ್.ಬಿ.ಚಿಲಮಿಯವರು ಈ ಕೃತಿಯ ಪ್ರಸ್ತಾವನೆಯಲ್ಲಿ ಹೇಳಿರುವಂತೆ ಭಾರತ ಸರ್ಕಾರದ ನಿರ್ದೇಶನದ ಮೇರೆಗೆ ರಾಯಬಾಗ ತಾಲೂಕಿನಲ್ಲಿರುವ ಹಸ್ತ ಪ್ರತಿ ಸಂಗ್ರಹಣಾ ಸರ್ವೇಕ್ಷಣ ಕಾರ್ಯವನ್ನು ಮಾಡಿದವರು. ಆ ಸಮಯದಲ್ಲಿ ಈ ಭಾಗದ ಜನಪದ ಕವಿಗಳು ಹಲವರು ಆಗಿ ಹೋಗಿದ್ದಾರೆ. ರಟ್ಟ ಅರಸರ ಆಳ್ವಿಕೆಯ ಸಂದರ್ಭದಲ್ಲಿ ಆಗಿಹೋದ ಗಣಿತ ಶಾಸ್ತ್ರಜ್ಞ ರಾಜಾಧಿತ್ಯ ಕವಿಯೇ ಈ ತಾಲೂಕಿನ ಮೊದಲಕವಿಯೆನಿಸಿದ್ದಾನೆ. ಆತನ ಕಾಲ ೧೧ನೆಯ ಶತಮಾನ ಅನಂತರದಲ್ಲಿ ಕಲಶಿದ್ದ, ಕಿರಗೂಡಿನ ಕಲ್ಮೇಶ್ವರ ಮಹಾಸ್ವಾಮೀಜಿ, ದಿಗ್ಗೇವಾಡಿಯ ಬಾಬಾ ಜಮಾದಾರ, ನಿಡಗುಂದಿಯಯಡನುನಪ್ಪ ಚಲವಾದಿ, ಮುಗಳಖೋಡದ ರಾಚಯ್ಯ, ಹಾರೂಗೇರಿಯ ಅಲಭೈರಿ ಕವಿ ಮುಂತಾದ ಜನಪದ ಆಶುಕವಿಗಳು ಪ್ರಾತಃಸ್ಮರಣೀಯರಾಗಿದ್ದಾರೆ

ಇವರು ರಾಜಾದಿತ್ಯದ ತರುವಾಯ ಸುಮಾರು ಆರೇಳು ನೂರು ವರ್ಷಗಳ ನಂತರವಾದರೂ ಜನಪದ ಸಾಹಿತ್ಯ ರಚನೆಯಾಗಿತ್ತು. ಆದರೆ ಪ್ರಕಟವಾಗಲಿಲ್ಲವೆಂದು ಖೇದ ವ್ಯಕ್ತ ವ್ಯಕ್ತಪಡಿಸಿದ್ದಾರೆ. ಆಶುಕವಿಗಳಾಗಿದ್ದ ಇವರೆಲ್ಲರೂ ಡೊಳ್ಳಿನ ಹಾಡು, ಗೀಗೀ ಪದ, ರಿವಾಯತ್ ಅಥವಾ ಕರ್ಬಲ್, ಸಂಪ್ರದಾಯದ ಹಾಡುಗಳು, ಸೋಬಾನ ಹಾಡು ಮತ್ತು ಲಾವಣಿಗಳನ್ನು ರಚಿಸಿರುವರೆಂಬುದು ವದಂತಿಯಿದೆ. ಇದರಲ್ಲಿ ಅಲಭೈರಿ ಕವಿಗೆ ಅಗ್ರಸ್ಥಾನವಿದೆಯೆಂದು ಚಿಲಮಿಯವರು ಪ್ರತಿಪಾದಿಸಿದ್ದುದನ್ನು ಸ್ಮರಿಸಬಹುದು.

ಅಲಭೈರಿ ಕವಿಯು ಇಂತಹ ಹಾಡುಗಳನ್ನು ೧೫೦೦ರ ಮೇಲ್ಪಟ್ಟು ರಚಿಸಿರುವನೆಂಬುದಾಗಿ ಹೇಳಲಾಗಿದೆ. ಶಿವಪಾರಿಜಾತದಂತಹ ಬಯಲಾಟ ರಚಿಸಲೂ ಪ್ರೋತ್ಸಾಹ ನೀಡಿರುವನೆಂದು ಹೇಳಿದ್ದಾರೆ, ಜನಭಕ್ತಿ ಗೀತೆಗಳ ಸಂಕಲನವೊಂದು ಈತನ ಪ್ರಕಟಿತ ಕೃತಿಗಳಲೊಂದು ಮಾತ್ರ ಆಗಿತ್ತು. ಇನ್ನೂ ಅನೇಕ ಕೃತಿಗಳನ್ನು ರಚಿಸಿರುವನೆಂದು ಹೇಳಿಕೆಯಿದೆಯಾದರೂ ಪುಸ್ತಕಗಳು ಲಭ್ಯವಿಲ್ಲ. ಆದರೆ ಚಿಲಮಿಯ 'ಅಲಭೈರಿ ಕವಿ'ಯ ಹಸ್ತ ಪ್ರತಿ ಪಡೆಯುವಲ್ಲಿ ಯಶಸ್ವಿಯಾದದರಿಂದ ಕೆಲವು ಊರ ಹಿರಿಯರ- ಯುವಕರ ಮನವೊಲಿಸಿ ಈ ಎರಡು ಪುಸ್ತಕಗಳನ್ನು ಪ್ರಕಟಿಸಲು ಶ್ರಮಿಸಿದ್ದಾರೆ. 'ಗಣನಾಥನೆ ಪಾಲಿಸೆನ್ನನು' ಎಂಬ ಗಣೇಶನ ಸ್ತುತಿಯೊಂದಿಗೆ ಪ್ರಾರಂಭವಾಗುವ ಈ ಗ್ರಂಥವು ೧೧೯ ಒಟ್ಟು ಸಣ್ಣ-ದೊಡ್ಡ ಭಜನೆಯ ಅಥವಾ ತತ್ತ್ವ ಪದಗಳ ಸಂಕಲನವಿದಾಗಿದೆ. ಒಟ್ಟು ೧೦೮ ಪುಟಗಳುಳ್ಳ ಕೃತಿಯಿದಾಗಿದೆ. ಚೆನ್ನವೃಷಭೇಂದ್ರ ಮಹಾಸ್ವಾಮಿಗಳಿಗೂ ಅಲಭೈರಿ ಕವಿಗುಣ ಗುರು-ಶಿಷ್ಯ, ಸ್ವಾಮಿ-ಭಕ್ತರ ಸಂಬಂಧವಿದ್ದುದು ಕಂಡುಬರುತ್ತದೆ. ಚೆನ್ನವೃಷಭೇಂದ್ರರನ್ನು ಸ್ಮರಿಸುವ ಭಜನೆಯ ಪದಗಳೇ ಈ ಸಂಕಲನದಲ್ಲಿ ಹೆಚ್ಚಾಗಿವೆ. ಹಾರೂಗೇರಿಗೆ ಹರಗಿರಿ ಎಂದು ಸಂಭೋಧಿಸಿದ್ದು ಕಂಡು ಬರುತ್ತದೆ.

"ಸಂತಿವಳಗ ಇವಡಿಗಿಲ್ಲೊ ಘವಾ
ಹಂಚಿಗಟ್ಟಿ ತಿರುಗಿ ಕಿಸದಾರ ಹುಲ್ಲಾ
ಅಂತರಂಗ ಭೇದ ಭ್ರಾಂತಿಯ ಪೊಂಡಿ
ಕಾರಂತರ ಬಿದ್ದರೊ ಅಡವಿ ಪಾಲಾ
ಸದಾ ಚಿಂತಿಸಿ ಹರಗಿರಿ ತತ್ತ್ವ ಮೂಲಾ
ಬುದ್ಧಿವಂತರಾದವರಿಗೆ ಬಂಧನವಿಲ್ಲಾ"[೩](ಪದ-೭೬)

ಸಂಸಾರ ಸಾಗರದಲ್ಲಿ ಬಿದ್ದವನಿಗೆ ಸುಖ-ಶಾಂತಿ ನೆಮ್ಮದಿಗಳು ಸಿಗಲಾರವು ಮಾಯಾ-ಮೋಹತೊರೆದು ಹರಗಿರಿ ವಾಸನೆನಿಸಿದ ಶಿವಯೋಗಿಯ ಸ್ಮರಿಸಿದರೆ ಬುದ್ಧಿವಂತರಾಗುವಿರಿ, ಮೋಕ್ಷ ಪಡೆಯುವಿರೆಂಬುದಾಗಿ ಈ ಪದ ತಿಳಿಸುತ್ತದೆ.

"ತೊಗಲಿನದೋ ಈ ದೇಹ ತೊಗಲಿನದೋ

ಬಗಿಯಲು ಬ್ರಹ್ಮ ಸೃಷ್ಟಿ ತೊಗಲಿನದು ಸರ್ವ"[೪]

ಎನ್ನುವಲ್ಲಿ ಈ ಚರ್ಮಕ್ಕೆ ಕೊಡುವ ಬೆಲೆ ಎಂಥದು ಎನ್ನವರನ್ನು ಈ ಪದ ಮೂಲಕ ವ್ಯಂಗ್ಯ-ವಿಡಂಬನೆ ಮಾಡಿದ್ದಾನೆ.

ಪುಟ-೯೧ರಲ್ಲಿರುವ ಪದ-೧೦೪ರ ಭಜನೆಯ ಪದವನ್ನು ಗಮನಿಸಲಾಗಿ-
ಗುರುವೆ ನಿಮ್ಮ ಕರುಣ ಒಂದೇ ಸ್ಥಿರವಾಗಿರಲಿ

ಧರೆಯ ಭೋಗ ಸುಖಗಳೆನಗೆ ದೊರೆಯದ್ಹೊಗಲಿ

ಸಿರಿಯ ಸಂಪತ್ತವರಿಗೆ ಬಂದು ಸುಖಿಯಾಗಿರಲೆಂದು.

ಕವಿ ಹೇಳಿದ್ದುದು- ಮುಪ್ಪಿನಾರ್ಯರ 'ತಿರುಕನು ಕಂಡ ಕನಸು' ತತ್ತ್ವಪದವನ್ನು ನೆನಪಿಸುತ್ತದೆ. ಪದ-೭೯ರಲ್ಲಿ ಇಸ್ಲಾಂ ಧರ್ಮದ ಗಾಟಿಯಲ್ಲಿದೆ. ಪದ- ೫೫ರಲ್ಲಿ (ಪುಟ-೫೧) ಶ್ರೀ ಗುರು ಚೆನ್ನವೃಷಭಾರೂಢ ಶಿವ

ಯೋಗೀಶ್ವರನಿಗೆ ನಮೋ ನಮೋ

ಜಗದಾದಿ ಕಾರಣ ನಿಗಮಾಗಮವಂದ್ಯ

ಸಗುಣ ಶಿವನಿಗೆ ನಮೋ ನಮೋ

ಎಂದು ಪ್ರಾರ್ಥಿಸಿದ್ದಾನೆ ಕವಿ.

ಈ ಕೃತಿಯ ಕೊನೆಗಿರುವ ಸುಮಾರು ಏಳು ಮಂಗಳಾರತಿ ಪದಗಳಿವೆ. ನಮ್ಮ ನಾಡಿನ ಸಂಸ್ಕೃತಿಯ ಪರಂಪರೆಯನ್ನು ಸಾರುವ ಪ್ರಮುಖ ಸ್ತೋತ್ರಗಳಿವು. ಒಟ್ಟಿನಲ್ಲಿ ಅಲಭೈರಿ ಕವಿಯ ಭಜನಾ ಪದಗಳನ್ನು ಚಿಲಮಿಯವರು ಸಂಪಾದನೆ ಮಾಡಿಕೊಟ್ಟಿದ್ದು ಶ್ಲಾಘನೀಯ ಮತ್ತು ಕವಿಯ ಸಾಹಿತ್ಯಕ್ಕೆ ನೀಡಿದ ಗೌರವವೆಂದು ನಾನು ಭಾವಿಸಿದ್ದೇನೆ.

೪. ನಾಲ್ಕನೆಯ ಸಂಪಾದಿತ ಕೃತಿ **ಅಲಭೈರಿ ಕವಿಯ ಡೊಳ್ಳಿನ ಹಾಡುಗಳ** ಸಂಕಲನ ಇದೂ ಸಹ ಚೆನ್ನವೃಷಭೇಂದ್ರ ಪ್ರಕಾಶನದ ವತಿಯಿಂದ ಹಾರೂಗೇರಿಯ ಸರಸ್ವತಿ ಮುದ್ರಣಾಲಯದಿಂದ ೨೦೦೮ರಲ್ಲಿ ಮುದ್ರಣಗೊಂಡ ಕೃತಿಯಿದು. ಇದರಲ್ಲಿ ಸುಮಾರು ಡೊಳ್ಳಿನ ಹಾಡುಗಳಿವೆ. ಈ ಭಾಗದಲ್ಲಿ ಕವಿಯ ಡೊಳ್ಳಿನ ಹಾಡುಗಳ ಭರಾಟೆ ಹೆಚ್ಚು, ಡೊಳ್ಳಿನ ಹಾಡುಗಳಲ್ಲಿ ಡೊಳ್ಳು ಪ್ರಮುಖವಾದ ವಾದ್ಯವಾಗಿರುತ್ತದೆ. ಅದರೊಂದಿಗೆ ಚಳ್ಳಮ ಹಾಗೂ ಕೊಳಲುಗಳಿರುತ್ತವೆ. ಡೊಳ್ಳಿನ ಹಾಡಿನವರ ಮೇಳದಲ್ಲಿ ಪ್ರಮುಖ ಹಾಡನ್ನು ಅಂದರೆ ಪಲ್ಲವಿಯನ್ನು ಇಬ್ಬರು ಮುಮ್ಮೇಳದಲ್ಲಿ ಅನಂತರ ಇಬ್ಬರು ಅಥವಾ ನಾಲ್ವರು ಹಿಮ್ಮೇಳದಲ್ಲಿ ಹಾಡುತ್ತಾರೆ.

ಸ್ವಾಮಿ ನಮ್ಮಯ ದೇವರ ಬಂದಾರ ಬನ್ನಿರೇ

ದೇವಿ ನಮ್ಮಯ ದೇವರ ಬಂದಾರ ಬನ್ನಿರೇ

ಈ ರೀತಿಯಾಗಿ ದೇವರನ್ನು ನೆನೆದು ಪಲ್ಲವಿಯನ್ನು ಎಲ್ಲರೂ ಜೊತೆಗೂಡಿಕೊಂಡು ಹಾಡಿದ ನಂತರ ಪ್ರಮುಖ ಹಾಡುಗಾರರು ಹಾವಭಾವದೊಂದಿಗೆ ಹಾಡುತ್ತಾರೆ.

**ಡೊಳ್ಳಿನ ಹಾಡುಗಳ ವಿಷಯ**

ಈ ಹಾಡುಗಳಲ್ಲಿ ಹಾಲುಮದ ವಿಚಾರ ಆ ಮತದ ದೇವರು, ಆ ಮತದಲ್ಲಿರುವ ಮಹಾಪುರುಷರ ಜೀವನ ವೃತ್ತಾಂತ, ಆ ಮತದ ವೃತ್ತಿಯ ಶಕ್ತಿಯಾಗಿರುವ ಕುರಿತು ಉತ್ಪತ್ತಿ ಅವುಗಳ ಹಿರಿಮೆ -ಗರಿಮೆ-ಮುಂತಾದ ವಿಷಯಗಳನ್ನು ಒಳಗೊಂಡಿರುತ್ತದೆ. ಕನ್ನಡ ಜನಪದ ಗೀತೆಗಳಲ್ಲಿ ಡೊಳ್ಳಿನ ಹಾಡುಗಳ ಗಾತ್ರ ತಕ್ಕಮಟ್ಟಿಗಿದ್ದು; ಇವು ಈಗಲೂ ಕೇಳಲು ಸಿಗುತ್ತವೆ. ಕೋಲಾಟದ ಹಾಡುಗಳಂತೆ ಕ್ಷೀಣಿಸಿಲ್ಲ, ಮಾಯವಾಗಿಲ್ಲ. ಈ ಪರಂಪರೆ ಈ ಭಾಗದಲ್ಲಿ ಈಗಲೂ ಮುಂದುವರೆದಿದೆ. ಈ ಹಾಡುಗಳು ಮನರಂಜನೆಗಿಂತಲೂ, ಮತಶ್ರದ್ಧೆಯೇ ಹೂರಣವಾಗಿದೆ. ಸಾಮಾನ್ಯವಾಗಿ ನೀತಿ ಬೋಧನೆ ಈ ಹಾಡುಗಳ ಉದ್ದೇಶವಾಗಿದೆ. ಅದರಲ್ಲಿಯೂ ಅಲಭೈರಿ ಕವಿಯ ಡೊಳ್ಳಿನ ಹಾಡುಗಳೇ ಇಲ್ಲಿ ಖ್ಯಾತಿ ಹೊಂದಿವೆ. ಕಂಠದಿಂದ ಕಂಠಕ್ಕೆ ಈ ಜನಾಂಗದವರಲ್ಲಿಯೂ ಸಾಗಿ ಬಂದಿವೆ. ಈ ಕವಿಯ ಡೊಳ್ಳಿನ ಹಾಡುಗಳು ಪ್ರಕಟಗೊಳ್ಳಲಾರದೊಂದು ದೊಡ್ಡ ನಷ್ಟ. ಆ ನಷ್ಟವನ್ನು ಹೋಗಲಾಡಿಸಿ ಈ ಕವಿಯ ೫೨ ಡೊಳ್ಳಿನ ಹಾಡುಗಳು ಚಿಲಮಿಯವರಿಂದ ಸಂಪಾದನೆಯಾಗಿ ಪ್ರಕಟಗೊಂಡುದು ತೀರಾ ಸಂತಸ ಮತ್ತು ಈ ಭಾಗದ ಜನತೆಗೂ ಅವಶ್ಯಕತೆಯಿತ್ತು ಎಂಬುದು ನನ್ನ ಅಭಿಮತ.

**ಪ್ರಕಟಿತ ಪ್ರಮುಖ ಲೇಖನಗಳು:**

'ಬೇಂದ್ರೆಯವರ ಸಖೀಗೀತ: ಒಂದು ಚಿಂತನೆ' ಎಂಬ ಚಿಲಮಿಯವರು ವಿಮರ್ಶಾ ಲೇಖನವನ್ನು ಮೈಸೂರು ವಿ.ವಿ.ಯವರು ಪ್ರಕಟಿಸಿದ್ದಾರೆ. ಇಲ್ಲಿ ಬೇಂದ್ರೆಯವರ ಕಾವ್ಯದ ಮಹೋನ್ನತಿಯೊಂದಿಗೆ ಪ್ರೇಮಭಾವ, ಬೆಳದಿಂಗಳ ಪರಿಣಾಮಕುರಿತು ಚರ್ಚಿಸಲಾಗಿದೆ. ಜನಪದ ಶೈಲಿಯಲ್ಲಿ ಕಾವ್ಯದ ನಾಡಿ ಮಿಡಿಯುವ ಬೇಂದ್ರೆಯವರ ಕಾವ್ಯ ಗುಣಗಳನ್ನು ಚಿಲಮಿಯವರು ಎಳೆಎಳೆಯಾಗಿ ಬಿಡಿಸಿದ್ದಾರೆ.

೨೦೦೦-೦೧ರಲ್ಲಿ ಮಂಗಳಗಂಗೋತ್ರಿ ಮಂಗಳೂರು ವಿಶ್ವವಿದ್ಯಾಲಯದ ಪುನಶ್ಚೇತನ ಶಿಬಿರದಲ್ಲಿ ಬ.ಗಿ.ಯಲ್ಲಟ್ಟಿಯವರ ದೇವನ ಆಸ್ತಿ ಕವಿತೆಯ ಸ್ವಾರಸ್ಯವನ್ನು ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧವು ಅಲ್ಲಿಯ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಅಹಂಕಾರ ಯಾವಾಗಲೂ ಯಾವುದೇ ವ್ಯಕ್ತಿಗೆ ಸಲ್ಲದು ದೇವರ ಮುಂದೆ ನಾನು ನೀವೆಲ್ಲರೂ ತೃಣ ಸಮಾನರು "ನಾನ್ನೇ ಕಟ್ಟಿಸಿದೆ ನಾನೇ ಹುಟ್ಟಿಸಿದೆ" ಎಂಬುದು ಜಂಬದ ಸೊಲ್ಲು-ಅಂತ್ಯಕಾಲಕ್ಕೆ ತೋರುವುದೇ ನುಡಿ ಜೊಳ್ಳು ಎಂದು ಪ್ರತಿಪಾದಿಸಿದ್ದಾರೆ.

ದಿನಾಂಕ ೨೧.೧೦.೧೯೯೮ರಲ್ಲಿ 'ಮುಗಳಖೋಡ ವಾಣಿ' ಪತ್ರಿಕೆಯಲ್ಲಿ 'ಶ್ರೀ ಸದ್ಗುರು ಯಲ್ಲಾಲಿಂಗ ಮಹಾಸ್ವಾಮೀಜಿ' ಯವರನ್ನು ಕಂಡವರು, ಅವರ ದರ್ಶನ ಭಾಗ್ಯ ಪಡೆದವರು ಚಿಲಮಿ. ಆದುದರಿಂದ ಜೀವನ-ವೈರಾಗ್ಯದ ವಿವೇಚನೆ, ಜೀರಿದ ಪವಾಡ ಮುಂತಾದ ವಿಚಾರಗಳನ್ನು ಅವರ ದಿವ್ಯ ಚರಿತ್ರೆಯ ಹಿನ್ನೆಲೆಯಾಗಿ ಚರ್ಚಿಸಿರುವುದು. ಈ ಭಾಗದಲ್ಲಿ ಸಿದ್ಧಿ-ಪ್ರಸಿದ್ಧಿಯನ್ನು ಹೊಂದಿದಂತಹ ದಾಸೋಹ ಸಿದ್ಧ-ಸಂಸ್ಥಾನಮಠ ಅನ್ನದಾಸೋಹದ ಬಾಗಿಲು ಸದಾ ತೆಗೆದಿರುತ್ತದೆ. ತ್ರಿವಿಧ ದಾಸೋಹ ಮೂರ್ತಿ, ವೈರಾಗ್ಯ ಚಕ್ರವರ್ತಿಯು ಲಚ್ಯಾಣದಿಂದ ಆಗಮಿಸಿ ಮುಗಳಖೋಡದಲ್ಲಿ ಶ್ರೀ ಮಠವನ್ನು ನಿರ್ಮಿಸಿ ಅವರು ಐಕ್ಯಸ್ಥಲವನ್ನೇರಿದರೂ, ಹೆಸರು ಚಿರಕಾಲ ಉಳಿಯುವಂತಾಗಿದೆಯೆಂಬುದನ್ನು ಸವಿವರವಾಗಿ ಚಿಲಮಿಯವರು ಬಣ್ಣಿಸಿರುವದು.

ದಿನಾಂಕ ೧೮.೧೧.೧೯೯೮ರಲ್ಲಿ ಚಿಲಮಿಯವರು ದಕ್ಷಿಣ ಭಾರತ ಮತ್ತು ಉತ್ತರ ಭಾರತದ ಪ್ರವಾಸ ಕೈಕೊಳ್ಳುತ್ತಾರೆ. ಅವರು ತಮ್ಮ ಸಹೋದ್ಯೋಗಿ ಮಿತ್ರರೊಂದಿಗೆ ಮಹಾರಾಷ್ಟ್ರ, ಮಧ್ಯಪ್ರದೇಶ, ರಾಜಸ್ಥಾನ. ಗುಜರಾತ. ದೆಹಲಿ ಮುಂತಾದ ಪ್ರಾಂತದ ಪ್ರಮುಖವಾದ ಪ್ರೇಕ್ಷಣೀಯ ಸ್ಥಳಗಳನ್ನು ವೀಕ್ಷಿಸಿ ದೆಹಲಿಗೆ ತಲುಪುತ್ತಾರೆ. ವಿಶೇಷ ವಾಹನ ಮಾಡಿಕೊಂಡು ಹೋದ ಜನರು ನೆರೆಯ ರಾಷ್ಟ್ರವಾದ ನೇಪಾಳದ ರಾಜಧಾನಿ ಕಠ್ಮಂಡುವಿಗೆ ಹೋಗುತ್ತಾರೆ. ಅಲ್ಲಿಯ ರಾಜ ಮಹಾರಾಜರ ಅರಮನೆ, ಬುದ್ಧದೇವನ ಗುಮ್ಮಟಾಕಾರದ ದೇವಾಲಯ, ಪಶುಪತಿನಾಥನ ದೇವಾಲಯ ಮತ್ತು ನಗರದ ಕೊನೆಗಿರುವ ವಿಮಾನ ನಿಲ್ದಾಣ-ಕಠ್ಮಂಡುನಗರ ಮುಂತಾದವುಗಳನ್ನು ಸುಮಾರು ೨೧ ದಿವಸಗಳ ಕಾಲ ಸುತ್ತಾಡಿಕೊಂಡು ಬಂದ ಅನುಭವಗಳನ್ನು ತಮ್ಮ ಪ್ರವಾಸ ಕಥನವೆನ್ನುವ ರೀತಿಯಲ್ಲಿ ಮೇಲ್ಕಾಣಿಸಿದ ದಿನಾಂಕದಂದು 'ಮುಗಳಖೋಡ ವಾಣಿ' ಪತ್ರಿಕೆಯಲ್ಲಿ ಪ್ರಕಟಪಡಿಸಿದ್ದಾರೆ. ಅದೊಂದು ಪ್ರವಾಸ ಕಥನವಾಗಿದೆಯೆಂದು ನಾನು ಭಾವಿಸಿದ್ದೇನೆ.

ನ್ಯಾಯಕ್ಕಾಗಿ ನಾನು ಹೊಸ ವರುಷದ ವಿಶೇಷಾಂಕವಿದು ಹಾರೂಗೇರಿಯಿಂದ ಹೊರಡುತ್ತದೆ. ಈ ಪತ್ರಿಕೆಯಲ್ಲಿ ' ಜನಪದ ಸಾಹಿತ್ಯದಲ್ಲಿ ಒಡಪುಗಳ ವೈವಿಧ್ಯತೆ' ಎಂಬ ಲೇಖನವನ್ನು ಬರೆದು ಪ್ರಕಟಿಸಿರುವರು ಅದು ಗ್ರಾಮೀಣ ಜನಾಂಗಕ್ಕಿಂತೂ ತುಂಬಾ ಹಿಡಿಸುವಂತಿದೆ. ಒಡಪು ಎಂಬ ಪದದ ವಿಶ್ಲೇಷಣೆ, ಮಂಗಲಮಯ ಕಾರ್ಯಗಳಲ್ಲಿ ಬಹು ಖುಷಿಯಿಂದ ಗಂಡ-ಹೆಂಡತಿಯ ಹೆಸರು ಹೇಳುವಾಗ, ಹೆಂಡತಿ-ಗಂಡನ ಹೆಸರು ಹೇಳುವಾಗ, ಮಂಗಳಕರ ವಾತಾವರಣದಲ್ಲಿ ಆರತಿ ಮಾಡುವಾಗ ಒಡಪು ಹಾಕಿ ತಮ್ಮ ಗಂಡ-ಹೆಂಡಂದಿರ ಹೆಸರು ಹೇಳುವ ಕಲೆಯನ್ನು ರಮ್ಯವಾಗಿ ಉದಾಹರಣೆ ಸಹಿತವಾಗಿ

ವಿವರವಾದ ಲೇಖನವಿದಾಗಿದೆ.

೨೦೦೪ರಲ್ಲಿ ಪ್ರಕಟವಾದ 'ಶಂಕರ ಸಿರಿ' ಎಂಬ ಸ್ಮರಣ ಸಂಚಿಕೆಯಲ್ಲಿ 'ಕುರುಹಿನ ಶೆಟ್ಟಿ ಸಮಾಜ ಮತ್ತು ಜದ್ಗುರು ಶಂಕರಶಿವಾಚಾರ್ಯ' ಎಂಬ ಲೇಖನ ಪ್ರಕಟವಾಗಿದೆ. ಇದರಲ್ಲಿ ವೀರಶೈವ ಕುರುಹಿನಶೆಟ್ಟಿ ಸಮಾಜವನ್ನು ಶ್ರೀಗಳು ಉದ್ಧಾರ ಮಾಡಿದಬಗೆ, ಸಮಾಜದಲ್ಲಿ ಅವರು ಬೀರಿದ ಪ್ರಭಾವ, ಅವರ ವೈರಾಗ್ಯಶೀಲತೆ ಮುಂತಾದ ಅಂಶಗಳನ್ನು ಕುರಿತು ವಿವರಿಸಿದ್ದಾರೆ.

೨೦೦೪ರಲ್ಲಿ 'ಚೇತನ' ಎಂಬ ಮಾಸಿಕ ಪತ್ರಿಕೆಯಲ್ಲಿ 'ಕನ್ನಡ ಜಾಗ್ರತಿಗೆ ಡೆ.ಚನ್ನಬಸಪ್ಪನವರ ಕೊಡುಗೆ' ಎಂಬ ಲೇಖನ ಪ್ರಕಟವಾಗಿದೆ. ಇದರಲ್ಲಿ ಅವರ ಬದುಕಿನ ಚಿತ್ರಣ. ಅವರು ಕನ್ನಡಕ್ಕೆ ಕೊಟ್ಟ ಸ್ಥಾನಮಾನ, ಕನ್ನಡ ಶಾಲೆಗಳನ್ನು ಹೆಚ್ಚಳಗೊಳಿಸುವಾಗ ಬ್ರಿಟೀಷ್ ಮೇಲಾಧಿಕಾರಿಗಳಿಂದ ವಾದ ವಿವಾದ, ಮುಂತಾದವುಗಳನ್ನುಈ ಲೇಖನದಲ್ಲಿ ತಿಳಿಯಪಡಿಸಿದ್ದಾರೆ.

೨೦೦೭ರಲ್ಲಿ 'ಸುಕುಮಾರ' ಎಂಬ ಪತ್ರಿಕೆಯ್ಲಲಿ ' ಗುರು–ಶಿಷ್ಯರ ಸಂಬಂಧ ಅಂದು ಇಂದು' ಲೇಖನ ಪ್ರಕಟವಾಗಿದೆ. ಇದರಲ್ಲಿ ಅಲ್ಲಮ ಪ್ರಭುವಿನ ವಚನೋಕ್ತಿಯನ್ನು ಬಳಸಿಕೊಂಡು ಬರೆದ ಈ ಲೇಖನ ಗುರುವಿಗೆ ಸಲ್ಲಿಸುವ ಗೌರವ ಪೂಜ್ಯ ಭಾವನೆ ಮರೆಯಾಗುತ್ತಿದೆಯೆಂದು ತಿಳಿಸುತ್ತಾರೆ. ಗುರು ಶಿಷ್ಯರಿಬ್ಬರಲ್ಲಿಯೂ ವಿದ್ಯೆಯು ಪ್ರಾಪ್ತವಾಗಬೇಕಾದರೆ ವಿನಯವೇ ಭೂಷಣವೆಂದಿದ್ದಾರೆ. ಇದೊಂದು ವೈಚಾರಿಕವಾದ ಲೇಖನವಾಗಿದೆ. ಇದೇ ಕಾಲಾವಧಿಯಲ್ಲಿ ಪ್ರಕಟವಾದ 'ಸಮಾಜ ಹಾಗೂ ಮಾನವ ಧರ್ಮ' ಎಂಬ ಲೇಖನವು ಮರಡೀಮಠದ 'ಧರ್ಮ–ದೇವರು' ಎಂಬ ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಸಮಾಜ ಮತ್ತು ಮಾನವ ಧರ್ಮಕ್ಕೆ ಇರುವ ಸಂಬಂಧವನ್ನು ಕುರಿತು ಈ ಲೇಖನದಲ್ಲಿ ವಿವರಿಸಿದ್ದಾರೆ.

'ನ್ಯಾಯಕ್ಕಾಗಿ ನಾನು'– ದೀಪಾವಳಿ ವಿಶೇಷಾಂಕ ೨೦೦೩ರಲ್ಲಿ; ಚಿಲಮಿಯವರ ಸಾಮಾಜಿಕ ಚಿಂತನೆಯ ಲೇಖನ 'ಭಾರತೀಯ ಸಂಸ್ಕೃತಿ ಒಂದು ಸಮೀಕ್ಷೆ' ಎಂಬ ವೈಚಾರಿಕ ವಿಚಾರಗಳಿಂದೊಡಗೂಡಿದೆ. ನಮ್ಮ ಸಂಸ್ಕೃತಿಯ ಬೇರುಗಳು ಮಣ್ಣಿಗೆ ಹತ್ತಿರವಾದವು; ಇಲ್ಲವೇ ಪ್ರಕೃತಿಗೆ ಅತ್ಯಂತ ಸಮೀಪವಾದವುಗಳು ಎಂದು ಹೇಳುತ್ತ–ಸಂಸ್ಕೃತಿಯ ಮೂಲ ಭಾಗವೇ ಜನಪದವಾಗಿದೆಯೆಂದಿದ್ದಾರೆ. ಇದು ಸತ್ಯದ ಸಾಕಾರ ಸ್ವರೂಪವೇ ಆಗಿದೆ. ಬದುಕುವುದಕ್ಕಾಗಿ ನಿರ್ದಿಷ್ಟವಾದ ವಿನ್ಯಾಸವೇ ಸಂಸ್ಕೃತಿಯಾಗಿದೆ. ಹಿಂದುತ್ವ ಮಾದರಿಯನ್ನು ಅನುಸರಿಸಿದ್ದೇ ಸಂಸ್ಕೃತಿ. ಭಾರತೀಯ ಸಂಸ್ಕೃತಿಯು ಇಸ್ಲಾಂ, ಕ್ರೈಸ್ತ, ಸಿಖರು ಮುಂತಾದ ಜನಾಂಗದವರ ಸಂಸ್ಕೃತಿಯೂ ಆಗಿದೆ. ಅನೇಕ ಸಂಸ್ಕೃತಿಗಳಲ್ಲೊಂದು ಹಿಂದೂ ಸಂಸ್ಕೃತಿಯಾಗಿದೆ. ಅನೇಕ

ಜನಾಂಗ, ಭಾಷೆ, ಸಾಹಿತ್ಯ-ಸಂಸ್ಕೃತಿಗಳ ದೇಶ ನಮ್ಮದು ನಾವೆಲ್ಲರೂ ಸಿಹಿಯಾಗಿದ್ದೇವೆ, ಸುಖವಾಗಿದ್ದೇವೆಯೆಂದು ಹೇಳುವುದೇ ಸಂಸ್ಕೃತಿ ಎಂದು ಮುಂತಾದ ಅಭಿಪ್ರಾಯ ಮಂಡಿಸಿದ ವಿಶಿಷ್ಟವಾದ ಲೇಖನವಿದಾಗಿದೆ. ಇಡೀ ವಿಶ್ವದಲ್ಲಿಯೇ ನಮ್ಮ ದೇಶದ ಸಂಸ್ಕೃತಿ-ಪರಂಪರೆ ವಿವಿಧತೆಯಲ್ಲಿ ಏಕತೆಯನ್ನು ಹೊಂದಿದೆಯೆನ್ನುತ್ತಾರೆ ಚಿಲಮಿ.

**ವಿಮರ್ಶಾ ಲೇಖನಗಳು:**

ಚಿಲಮಿಯವರು ಕೆಲವು ಕಾವ್ಯಕೃತಿ, ಗದ್ಯಕೃತಿಗಳ ವಿಮರ್ಶಾವಲೋಕನವ ಮಾಡಿರುವರು: ಅವು ಈ ಕೆಳಗಿನಂತಿವೆ.

೧. ಪ್ರೊ.ಜಿ.ಎಸ್.ವಡಗಾವಿಯವರ 'ಹಾಸ್ಯದ ಹರಿಗೋಲು' ಎಂಬ ಕೃತಿಯ ಕುರಿತು ಅವಲೋಕನ ಮಾಡುತ್ತ ಇದು ೧೯ ವಿನೋದ ಪ್ರಬಂಧಗಳ ಸಂಕಲನ. ಸುಂದರ ಮುಖವಿನ್ಯಾಸ ಮತ್ತು ಡಾ.ಎಸ್.ವಿದ್ಯಾಶಂಕರ ಅವರು ಬರೆದ ಬೆನ್ನುಡಿ ಮತ್ತು ಅವರೇ ತಮ್ಮ ಸ್ನೇಹಾಪ್ರಿಂಟರ್ಸ್‌ದಿಂದ ಪುಸ್ತಕ ಮುದ್ರಣ ಮಾಡಿದ್ದಾರೆ. ಸೊಗಸು ಮತ್ತು ಅಚ್ಚುಕಟ್ಟಾಗಿದೆ. ಈ ಕೃತಿಯ ಲೇಖಕ ಜಿ.ಎಸ್.ವಡಗಾವಿಯವರು ಹತ್ತೊಂಬತ್ತು ನಿಟ್ಟಿನಲ್ಲಿ ವಿನೋದದಿಂದಲೇ ವೈಚಾರಿಕತೆಯನ್ನು ಬಿತ್ತಿ ಬೆಳೆದಿದ್ದಾರೆ. ಇದರಲ್ಲಿಯ ಪ್ರಬಂಧಗಳು ರುಚಿಕಟ್ಟಾಗಿದ್ದು; ಓದುಗರು ಗಮನ ಸೆಳೆಯುತ್ತವೆಯೆಂದು ಹತ್ತೊಂಭತ್ತು ಪ್ರಬಂಧಗಳ ತಿರುಳನ್ನು ಸಂಕ್ಷಿಪ್ತವಾಗಿ ತಿಳಿಯಪಡಿಸುವ ಪ್ರಯತ್ನವನ್ನಿಲ್ಲಿ ಮಾಡಿದ್ದಾರೆ. ಕೃತಿಯ ವಿಮರ್ಶೆ ಮಾಡುವೆಂದರೆ ಅದರ ಮೌಲ್ಯಮಾಪನ ಮಾಡುವುದೆಂದರ್ಥ ಅಂತಹ ಕೆಲಸವನ್ನು ಬಹುಸೂಕ್ಷ್ಮವಾಗಿ ಮತ್ತು ತೂಕಬದ್ಧವಾಗಿ ಮಾಡಿದ ಶ್ರೇಯಸ್ಸು ಚಿಲಮಿಯವರದಾಗಿದೆಯೆಂದೇ ಹೇಳಬೇಕಾಗುತ್ತದೆ.

೨. ಡಾ.ರಾಜಶೇಖರ ಬಸುಪಟ್ಟದ ಅವರ ಪಿಎಚ್.ಡಿ., ಮಹಾಪ್ರಬಂಧ-**'ಚಿತ್ತರಗಿ ಇಲಕಲ್ಲ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನಮಠ ಒಂದು ಸಾಂಸ್ಕೃತಿಕ ಅಧ್ಯಯನದ ಸಮೀಕ್ಷೆ'** ಮಾಡಿರುವುದು ಗಮನಾರ್ಹ. ಪಿಎಚ್.ಡಿ.ಕೃತಿಯ ಮೌಲ್ಯಮಾಪನ ಮಾಡುವುದೆಂದರೆ ಪಿಎಚ್.ಡಿ., ಮಾಡಿದವರೇ ಎಂಬಂತೆ; ಆ ಮಹಾಪ್ರಬಂಧದ ಒಳಹೊಕ್ಕು ಅದರ ಅಧ್ಯಯನ, ಅದರ ವಸ್ತುವಿವೇಚನೆ, ಶೈಲಿ, ವಿಷಯ ನಿರೂಪಣೆ, ಸಂಶೋಧನೆಗೊಳಪಟ್ಟ ಹೊಸ-ಹೊಸ ವಿಚಾರಧಾರೆಗಳು-ಮುಂತಾದವುಗಳನ್ನು ವೈಚಾರಿಕತೆಯ ಮೂಸೆಯಲ್ಲಿ ಉಜ್ಜಿದ್ದಾರೆ. ಈ ಮಹಾಪ್ರಬಂಧವು ಒಟ್ಟು ೮ ಅಧ್ಯಾಯಗಳ ಹರವು ಪಡೆದಿದ್ದು; ಚಿತ್ತರಗಿ-ಇಲಕಲ್ಲ ಗುರುಪೀಠ ಪರಂಪರೆ ೧೫ನೇ ಶತಮಾನದಿಂದಲೇ ಪ್ರಾರಂಭವಾಗುತ್ತದೆಯೆಂದು ಹೇಳಿದ ಬಸುಪಟ್ಟದ ಅವರು ಶ್ರೀಮಠದ ಮೂಲರೂವಾರಿ ಶ್ರೀ ವಿಜಯಮಹಾಂತೇಶ್ವರರೇ ಎಂಬುದಾಗಿ ದಾಖಲಿಸಿ ಅದಕ್ಕೆ ಪುರಾವೆಗಳನ್ನೂ ನೀಡಿದ್ದಾರೆ. ಅಂತರ್ ಶಿಸ್ತೀಯ ಅಧ್ಯಯನ ಮಾಡಿದ ಪ್ರಬಂಧಕಾರ ರಾಜಶೇಖರರು ಸತ್ಯ ಶೋಧನೆಯ ಮಾರ್ಗ ಕ್ರಮಿಸಿ ನಿಚ್ಚಳವಾದ ಮಾಹಿತಿಗಳನ್ನು

ಪ್ರತಿಪಾದಿಸಿದ್ದಾರೆಂದು ಚಿಲಮಿಯವರು ಅಭಿಪ್ರಾಯಪಟ್ಟಿರುವುದು ಸಮಂಜಸವಾಗಿದೆ. ಏಕೆಂದರೆ ಸಂಶೋಧನೆಯ ಆಯಾಮಗಳನ್ನು ಲೇಖಕರು ಅನುಸರಿಸಿದ್ದಾರೆಂಬುದು ಆಶಯ ವ್ಯಕ್ತಪಡಿಸಿದ್ದಾರೆ.

೩. ಕನ್ನಡದ ಹೆಸರಾಂತ ಕವಿಗಳಾದ ಡಾ.ಪಿ.ಎಸ್.ಕರ್ಕಿ ಹಾಗೂ ಈಶ್ವರ ಸಣಕಲ್ಲರ ಜನ್ಮ ಶತಮಾನೋತ್ಸವದ ಆಚರಣೆಯ ಸಂದರ್ಭದಲ್ಲಿ ಅಂದರೆ ೨೦೦೭ರಲ್ಲಿ ಬೆಳಗಾವಿಯಲ್ಲಿ ಸ.ರಾ.ಸುಳಕೊಡೆ ಅವರ ಸಂಪಾದಕತ್ವದಲ್ಲಿ 'ನೆನಹು' ಶರಣ ಸಂಚಿಕೆಯು ಪ್ರಕಟಗೊಂಡುದು ಸಂತಸದ ಸಂಗತಿ. ಹಚ್ಚೇವು ಕನ್ನಡದ ದೀಪದಿಂದ ಕರ್ನಾಟಕದ ಬೆಳಕು 'ಜಗವೆಲ್ಲ ನಗುತಿರಲಿ ಜಗದಳವು ನನಗಿರಲಿ ಎಂದು ಹಾಡಿದ ಈಶ್ವರ ಸಣಕಲ್ಲರು ಇಬ್ಬರೂ ಕನ್ನಡದ ಕುಲಪುತ್ರರು, ಅಶ್ವಿನೀ ದೇವತೆಗಳು. ಈ 'ನೆನಹು' ಸಂಚಿಕೆಯಲ್ಲಿ ಭಾಗ-೧ ಕರ್ಕಿಯವರಿಗಾಗಿ ಮೀಸಲಿದ್ದು; ಭಾಗ-೨ ಈಶ್ವರ ಸಣಕಲ್ಲರಿಗೆ ಮೀಸಲಿರಿಸಲ್ಪಟ್ಟಿದೆ ಭಾಗ-೨ರಲ್ಲಿರುವ ಮೊದಲ ಲೇಖನವೇ 'ವರಕವಿ ಈಶ್ವರ-ಸಣಕಲ್ಲರ ಬದುಕು-ಬರಹ-ಒಂದು ಅವಲೋಕನ' ಎಂಬುದು ಚಿಲಮಿಯವರು ಬರೆದುದಾಗಿದೆ. ಕ್ರಾಂತಿಕವಿ ಈಶ್ವರರ ಊರು ರಬಕವಿ. ಆದರೆ ನಿಜವಾಗಿಯೂ ಅವರು ಜನಿಸಿದ್ದು ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಯಾದವಾಡ ಗ್ರಾಮದಲ್ಲಿ ಅದು ಅವರ ತಾಯಿಯ ತವರೂರು. ಪ್ರಾಥಮಿಕ ಶಿಕ್ಷಣ ಯಾದವಾಡದಲ್ಲಿಯೇ ಆಗುತ್ತದೆ. ಸುಖಕ್ಕಾಗಿ ಸಣಕಲ್ಲರು ಹಂಬಲಿಸಲೇ ಇಲ್ಲ. ಹಿರಿಯ ತಲೆ ಮಾರಿನ, ಮಧುರಚೆನ್ನರ ಸಮಕಾಲೀನ ಸಣಕಲ್ಲರು ಕನ್ನಡಿಗರ ನೆನಪಿನಲ್ಲಿ ನಿರಂತರ ನಿಲ್ಲುವ ಅಪೂರ್ವ ಕವಿ. ತಮ್ಮ ಕವಿತೆಯ ಮೂಲಕ ಕನ್ನಡ ಕುಲಕೋಟಿಯ ಗಮನ ಸೆಳೆದ ಕ್ರಾಂತದರ್ಶಿ. 'ಜಗವೆಲ್ಲ ನಗುತಿರಲಿ ಜಗದಳವು ನನಗಿರಲಿ' ಎಂದು ಹಾಡಿದ ಕವಿ ಈಶ್ವರರು ಈ ಪಥ್ಯಕ್ಕೆ ತಾವೇ ನಿದರ್ಶನರಾದವರು. ಜೀವನದಲ್ಲಿ ಏನೆಲ್ಲ ಕಷ್ಟ-ಕಾರ್ಪಣ್ಯಗಳನ್ನು ಉಂಡರು ನಗುನಗುತ್ತಲೇ ಬಾಳಿದವರು. ಅವರ ಸಾಹಿತ್ಯದ ರಚನೆಯನ್ನೂ ಪರಿಚಯಿಸುತ್ತ ಜಗತ್ತಿನ ನೋವನ್ನು ತಾನು ನುಂಗಿ ಜಗತ್ತು ಸದಾ ಕಾಲ ನಲಿಯುತ್ತಿರಲಿ ಎಂದು ಹಾರೈಸಿ ಸಂದೇಶ ಮೀರಿದ ಕವಿ ಅದರಂತೆ ಕೋರಿದವರು ಎಂಬುದಾಗಿ ಸಣಕಲ್ಲರ ವ್ಯಕ್ತಿತ್ವವನ್ನು ಮೂರ್ತಿವತ್ತಾಗಿ ಕಟೆದು ನಿಲ್ಲಿಸಿದ್ದಾರೆ. ಕನ್ನಡಿಗರಿಗೆ ಈ ಇಬ್ಬರೂ ಕವಿಗಳು ಮಹಾಕವಿಪಟ್ಟಕ್ಕೆ ಭಾಜನರಾಗುತ್ತಾರೆಂದು ಹೇಳಿದ ಚಿಲಮಿಯವರ ಮಾತು ನಿತ್ಯ ಸತ್ಯವಾದುದು ಎನಿಸುತ್ತದೆ.

೪. **ಮುಖವಾಡಗಳ ಮರೆಯಲ್ಲಿ ಕೃತಿಯ ಸಮೀಕ್ಷೆ:** ೨೦೦೪ರಲ್ಲಿ ಶ್ರೀ ಗುರು ಚೆನ್ನಬಸವೇಶ್ವರ ಗ್ರಂಥಮಾಲೆ ಸುಂದರ ಪುಷ್ಪವಾಗಿ ಅರಳಿದ ಈ ಗ್ರಂಥವು ೩೩ ವೈಚಾರಿಕ ಮತ್ತು ಚಿಂತನಪರ ಲೇಖನವನ್ನೊಳಗೊಂಡಿದೆ. ಪ.ಪೂ.ಶ್ರೀ.ಪ್ರಭುಚೆನ್ನಬಸವ ಸ್ವಾಮಿಗಳವರ ಲೇಖನಿಯಿಂದ ಮೂಡಿಬಂದ ಈ ಕೃತಿ ತುಂಬಾ ವಿಚಾರ ಪ್ರಚೋದಕವುಂಟು ಮಾಡುವಂತಿದೆ. ಪೂಜ್ಯರು ಈಗಾಗಲೇ 'ವಚನ ತರಂಗ' ಮತ್ತು 'ವಚನ ಚೈತ್ರ'ಗಳ ಮೂಲಕ ಸಮಾಜದ ಪ್ರತಿಯೊಬ್ಬ ವ್ಯಕ್ತಿಯನ್ನು ಜಾಗೃತಗೊಳಿಸಿದ ಆಧುನಿಕ ವಚನಕಾರರಾಗಿದ್ದಾರೆ.

'ಮುಖವಾಡಗಳ ಮರೆಯಲ್ಲಿ'ರುವ ಪ್ರತಿಯೊಂದು ಲೇಖನವೂ ವಿಚಾರಜ್ಯೋತಿ, ಧರ್ಮಜ್ಯೋತಿಯ ಬೆಳಕಿನಲ್ಲಿ ಪ್ರಕಾಶಿಸುತ್ತವೆ. ಇಲ್ಲಿ ಪ್ರಮುಖವಾಗಿ ಆಯ್ ವಾಂಟ್ ಪೀಸ, ಒಂದಿಷ್ಟೂ ಬಿಡುವಿಲ್ಲ, ಮನಸ್ಸು ಮಾಡಬೇಕಷ್ಟೇ, ಆಧುನಿಕ ಧರ್ಮದ ಆತಂಕಗಳು, ಪರಿಸರ ನಾಶ, ಬಿಸಿಲಿನ ಆಕ್ರೋಶ, ಮಹಾತ್ಮರ ಹೆಸರಿನಲ್ಲಿ, ಪುಸ್ತಕವನ್ನು ಅಲಕ್ಷಿಸಬೇಡಿ, ಮುಂತಾದವು ಜನಾಂಗಕ್ಕೆ ಸೂಕ್ತವಾದ ಮಾರ್ಗದರ್ಶಿಕೆಗಳಂತಿವೆಯೆಂದು ಚಿಲಮಿಯವರು ಅವಲೋಕಿಸುತ್ತ ಅಭಿಪ್ರಾಯಪಟ್ಟಿದ್ದಾರೆ.

೫. **'ಕನ್ನಡದಲ್ಲಿ ಶೃಂಗಾರ ಸಾಹಿತ್ಯ'**–ಡಾ.ವ್ಹಿ.ಎಸ್.ಮಾಳಿಯವರ ಮಾರ್ಗದರ್ಶನದಲ್ಲಿ ಕ.ವಿ.ವಿ.ಧಾರವಾಡಕ್ಕೆ ಸಮರ್ಪಿಸಿದ ಸಾತಿಹಾಳ ಇವರ ಪಿಎಚ್.ಡಿ., ಮಹಾಪ್ರಬಂಧ ಇದೊಂದು ಉತ್ತಮ ಮಹಾಪ್ರಬಂಧವಾಗಿದ್ದು ಒಟ್ಟು ಆರು ಅಧ್ಯಾಯಗಳಿಂದೊಡಗೂಡಿದ ೧೭೨ ಪುಟಗಳ ಮಿತಿಯಲ್ಲಿರುವದಿದರ ವೈಶಿಷ್ಟ್ಯವಾಗಿದೆ. ಪ್ರಾಚೀನ ಕಾವ್ಯಗಳನ್ನು ಅನುಲಕ್ಷಿಸಿ; ಅಂದರೆ ಹತ್ತರಿಂದ ೧೫ನೆಯ ಶತಮಾನದ ಮಧ್ಯದ ಅವಧಿಯಲ್ಲಿ ಆಗಿ ಹೊದ ಚಂಪೂ ಕಾವ್ಯಗಳಲ್ಲಿರುವ ವಸ್ತು ವಿವೇಚನೆಯ ಜೊತೆ ಜೊತೆಗೆ ಶೃಗಾರ ರಸದ ನಿರೂಪಣೆಯೂ ವಿಶಿಷ್ಟ ಮತ್ತು ವೈವಿಧ್ಯತೆಯಿಂದ ಕೂಡಿ ಕಾವ್ಯಕ್ಕೆ ಕಳೆ ತಂದಿದೆಯೆಂಬುದನ್ನು ಸಂಶೋಧಕರು ಸರಿಯಾಗಿ ಗುರುತಿಸಿ ಸಮರ್ಥಿಸಿದ್ದಾರೆಂದು ಚಿಲಮಿಯವರು ಹೇಳಿದ್ದಾರೆ. ಶೃಂಗಾರ ಜೀವನದ ಶೃಂಗ ಶೃಂಗಾರದಿಂದಲೇ ಸೃಷ್ಟಿ ಮತ್ತು ಲಯ ಅದು ರಸ ಮಾತ್ರವಲ್ಲ ಬದುಕಿನ ಸಂಗೀತವಾಗಿದೆ. ಶೃಂಗಾರರಸವಿಲ್ಲದ ಕಾವ್ಯವೇ ಇಲ್ಲವೆಂಬುದನ್ನು ಸಾತಿಹಾಳ ಅವರು ಈ ಮಹಾಪ್ರಬಂಧದ ಮೂಲಕ ಸಾಬೀತುಪಡಿಸಿದರುವರು. ಶಿಸ್ತು, ಅಧ್ಯಯನ ಕ್ರಮವನ್ನು ಗಮನಿಸಿದರೆ ಸಂಯಮ, ಉದ್ವೇಗರಹಿತ ಅಧ್ಯಯನ ಈ ಮಹಾಪ್ರಬಂಧದ ಪ್ರಮುಖ ವೈಶಿಷ್ಟ್ಯಗಳಾಗಿವೆಯೆಂದೂ ಪ್ರತಿಪಾದಿಸಿದ್ದಾರೆ.

೬. ಬಿಜಾಪುರದ ಬಿರುಬಿಸಿಲಿನ ಮಧ್ಯದಲ್ಲಿ ಮಕ್ಕಳಿಗಾಗಿ ಅರಳಿದ ಕೃತಿ **'ಬೆದರ ಬೆಚ್ಚ'** ಎಂಬುದಾಗಿದೆ. ಇದರ ಕರ್ತೃ ಮಕ್ಕಳ ಸಾಹಿತಿ ಶರಣಪ್ಪ ಕಂಚ್ಯಾಣಿ ಎಂಬು ವವರಾಗಿದ್ದು; ೨೦೦೬–೦೭ರಲ್ಲಿ ಪ್ರಕಟವಾಗಿದೆ. ಹೆಸರೇ ಸೂಚಿಸುವಂತೆ ಬಯಲು ಸೀಮೆಯ ಹೊಲದಲ್ಲಿ ಹಕ್ಕಿ –ದನ–ಕರುಗಳನ್ನು ಹೆದರಿಸುವುದರ ಸಲುವಾಗಿ ಬೆದರುಗೊಂಬೆ ಅಥವಾ ಬೆದರಿಕೆಗಾಗಿ ಬೆಚ್ಚವನ್ನು ಹಾಕಿರುತ್ತಾರೆ. ಅದನ್ನು ಕಂಡ ಯಾರಿಗಾದರೂ ಮುಖ್ಯಗತ್ತಲೆಯಿದ್ದಾಗ ಹೆದರಿಕೆಯಾಗುತ್ತದೆ. ಅದರಲ್ಲೂ ಮಕ್ಕಳಿಗಂತೂ ತೀವ್ರ ಹೆದರಿಕೆಯಾಗಬಲ್ಲದು. ಮಕ್ಕಳ ಮನಸ್ಸನ್ನು ಅರಳಿಸುವಲ್ಲಿ ಅವರಿಗೆ ರುಚಿಯಾಗಿ–ಬೇಕಾಗಿರುವ ಕವಿತೆಗಳನ್ನು ರಚಿಸಿದ ಶ್ರೇಯಸ್ಸು ಹಿರಿಯ ಸಾಹಿತಿಗಳಾದ ಕಂಚ್ಯಾಣಿ ಶರಣಪ್ಪನವರಿಗೆ ಸಲ್ಲಬೇಕೆಂಬುದಾಗಿ ಚಿಲಮಿಯವರು ಬರೆದಿರುವುದು ಗಮನಾರ್ಹ ಸಂಗತಿ

೭. ಡಾ.ಡಿ.ಎಸ್.ಕರ್ಕಿಯವರ ನಾಡಿನವರಾದ ಚಿಲಮಿಯವರು ಕರ್ಕಿಯವರು ಹೊತ್ತಿಸಿದ 'ಹಚ್ಚೇವು ಕನ್ನಡದ ದೀಪ'ದಿಂದ ನಾಡು-ಗಡಿನಾಡು ಕಾಂತಿಯುತವಾಗಿ ಬೆಳಗುವಂತಾಗಿದೆಯೆಂಬ ಹೆಮ್ಮೆ ಅವರದು. ಡಾ.ಡಿ.ಎಸ್.ಕರ್ಕಿ ಮತ್ತು ಈಶ್ವರ ಸಣಕಲ್ಲರ ಶತಮಾನೋತ್ಸವದ ಸವಿ ನೆನಪಿಗಾಗಿ ಬರೆದಿರುವ ಲೇಖನ 'ಡಾ.ಡಿ.ಎಸ್.ಕರ್ಕಿಯವರ ಕಾವ್ಯದರ್ಶನ ಇದು ಬಸವಾದಿ ಪ್ರಮಥರ ವೈಚಾರಿಕ ಚಿಂತನೆಯ ಮಾಸ ಪತ್ರಿಕೆ 'ಸ್ವಪ್ನಲೋಕ' ಮಾರ್ಚ್ ೨೦೦೮ರಲ್ಲಿ ಪ್ರಕಟವಾಗಿದೆ. ಸ್ವಪ್ನಲೋಕದ ಸಂಪಾದಕರು ವಿದ್ವಾಂಸರಾದ ಡಾ.ಎಸ್.ವಿದ್ಯಾಶಂಕರ ಅವರಾಗಿದ್ದಾರೆ. ಈ ಸಂಚಿಕೆಯ ಮೊದಲ ಅಧ್ಯಾಯವೇ ಇದಾಗಿದೆ. "ಹಚ್ಚೇವು ಕನ್ನಡದ ದೀಪ-ಕರನಾಡ ದೀಪ ಸಿರಿನುಡಿಯ ದೀಪ- ಒಲವೆತ್ತಿ ತೋರುವಾ ದೀಪ" ಎಂಬ ಗೀತೆಯಿಂದ ಕನ್ನಡದ ಕಂಪನ್ನು ಕನ್ನಡ ನಾಡಿನ ಒಳ-ಹೊರಗೆಲ್ಲವೂ ಬೀರಿದ್ದ ಅಮರ ಕವಿಯಿತ. ಕನ್ನಡಿಗರ ಪ್ರೀತಿಯ, ನಲ್ಮೆಯ, ಅಚ್ಚುಮೆಚ್ಚಿನ, ಸ್ನೇಹದ ಕವಿ. ಕರ್ಕಿಯವರದು. ಸದುವಿನಯದ-ಸದಾಚಾರದ ಸಾತ್ವಿಕ ಸ್ವಭಾವವಾಗಿತ್ತು ಎಂಬುದಾಗಿ ಚಿಲಮಿಗೊಳಿದ್ದಾರೆ.

೮. ಸ್ವಪ್ನಲೋಕ ೨೦೦೮ರ ಸಂಚಿಕೆಯಲ್ಲಿ **'ತಿರುಕ್ಕುರುಳ್ ಕಾವ್ಯ-ಒಂದು ಅವಲೋಕನ'** ಎಂಬ ಲೇಖನ ಪ್ರಕಟವಾಗಿದೆ ಇದರಲ್ಲಿ ತಿರುಕ್ಕುರುಳ್ ಕಾವ್ಯ ತಮಿಳಿನ ತಿರುವಳ್ಳವರ್ ಸಂತ ಮಹರ್ಷಿಯಿಂದ ರಚಿಸಲ್ಪಟ್ಟ ಶ್ರೇಷ್ಠ ನೀತಿಕಾವ್ಯ. ಈ ಕೃತಿಕಾರನು ಕ್ರಿ.ಶ.ಒಂದೆರಡನೆಯ ಶತಮಾನದಲ್ಲಿದ್ದನೆಂಬುದನ್ನು ವಿದ್ವಾಂಸರು ಹೇಳಿದ ಅಭಿಪ್ರಾಯವನ್ನು ಚಿಲಮಿ ಕೊಡಮಾಡಿದ್ದಾರೆ. ಮನುಕುಲದ ಜ್ಞಾನಿಯೆಂದೇ ಕರೆಯಿಸಿಕೊಂಡ ತಿರುವಳ್ಳವರ್ ತಮಿಳಿನ ಮಹರ್ಷಿ-ಸಂತ-ಮಹಂತ ಈತನ ಈ ಕೃತಿ ತಮಿಳಿನ ವೇದವೆಂದೇ ಕರೆಯಿಸಿಕೊಂಡ ಕಾವ್ಯವಾಗಿದೆ. ಇದಕ್ಕೆ ತ್ರಿವರ್ಗ ಮತ್ತು ಉತ್ತರವೇದವೆಂದೂ ಹೆಸರಿದೆ. 'ಕುರಳ್ ವೆಣ್ಣಾ' ಎಂಬ ದ್ವಿಪಾದಗಳನ್ನೊಳಗೊಮಡ ಛಂದಸ್ಸಿನಲ್ಲಿ ರಚನೆಯಾದದ್ದರಿಂದ ಈ ಗ್ರಂಥಕ್ಕೆ 'ತಿರುಕ್ಕುರುಳ್' ಎಂಬ ಹೆಸರು ಪ್ರಾಪ್ತವಾಗಿದೆ. ಚತುರ್ವಿಧ ಪುರುಪಾರ್ಥಗಳಲ್ಲಿ ಮೊದಲಿನ ಮೂರು ಧರ್ಮ, ಅರ್ಥ, ಕಾಮ ಎಂಬ ಮೂರು ವಿಭಾಗಗಳಿದ್ದು, ಒಟ್ಟು ೧೩೩೦ ಕುರಳ್ (ದ್ವಿಪಾದ) ಪದ್ಯಗಳನ್ನು ಹೊಂದಿದೆ. ಅಂದರೆ ಧರ್ಮ ಭಾಗದಲ್ಲಿ ೩೮೦, ಅರ್ಥಭಾಗದಲ್ಲಿ ೭೦೦, ಕಾಮ ಭಾಗದಲ್ಲಿ ೨೫೦ ಕುರಳ್ ಪದ್ಯಗಳಿವೆಯೆಂದು ಹೇಳುವ ವಿಶ್ಲೇಷಣೆ ಒದಗಿಸಿದ್ದಾರೆ.

ಮಹರ್ಷಿ ತಿರುವಳ್ಳವರ್ ಹೇಳಿರುವ ಚತುರ್ವಿದ ಪುರುಷಾರ್ಥಗಳಲ್ಲಿ ಮೊದಲಿನ ಮೂರನ್ನು ಸರಿಯಾಗಿ ಆಚರಿಸಿದರೆ ನಾಲ್ಕನೆಯ ಪುರುಷಾರ್ಥ ಮೋಕ್ಷ (ಕೈವಲ್ಯ) ತನ್ನಷ್ಟಕ್ಕೆ ತಾನೇ ಪ್ರಾಪ್ತವಾಗಬಲ್ಲದೆಂದು ಹೇಳಿದ್ದು ಆ ಸಂತನ ಮಾತನ್ನು ಚಿಲಮಿ ಸಮರ್ಥಿಸಿರುವರು.

ಮಾನವ ಸಮಷ್ಟಿ ಜೀವನದ ಅಂಗತ್ರಯಗಳಾದ ಧರ್ಮ, ಅರ್ಥ, ಕಾಮಗಳನ್ನು ವಿಶ್ವಸ್ಥ ವಿಕಾಸ ತತ್ತ್ವದ ಪ್ರಕ್ರಿಯೆಗನುಗುಣವಾಗಿ ಬಳಸಿಕೊಂಡು, ಮೃಗತ್ವದಿಂದ ಬಿಡುಗಡೆ ಹೊಂದಿ ಮನಸ್ಸನ್ನು ಪರಿಶುದ್ಧ ಮಾಡಿಕೊಳ್ಳಬೇಕೆಂದು ಪ್ರತಿಪಾದಿಸಿದ್ದಾರೆ.

೯. **'ಕುವೆಂಪು ಕಾವ್ಯದಲ್ಲಿ ನಿಸರ್ಗ ಪ್ರಜ್ಞೆ'** ಎಂಬ ಲೇಖನವು ಚಂಪಾ ಅವರ ಸಂಕ್ರಮಣ ಪತ್ರಿಕೆಯ ಜೂನ್ ಮಾಸಿಕದಲ್ಲಿ ಪ್ರಕಟವಾಗಿದೆ. ಋಷಿಕವಿ, ನಿಸರ್ಗ ಪ್ರೇಮಿ, ಕನ್ನಡದ ವರ್ಡ್ಸ್‌ವರ್ಥ್ ಎಂದೇ ಖ್ಯಾತಿ ಹೊಂದಿದ ರಾಷ್ಟ್ರಕವಿ ಕುವೆಂಪು ಮಲೆನಾಡಿನ ಹಸಿರೇ ಉಸಿರಾದ ಪ್ರಕೃತಿಯ ಮಡಿಲಿನಲ್ಲಿ ಬೆಳೆದ ಪುಟ್ಟಪ್ಪನವರು ಕೋಗಿಲೆಗಳೊಂದಿಗೆ, ಬೆಳ್ಳಕ್ಕಿಯ ಹಿಂಡುಗಳೊಂದಿಗೆ ಹಾರಾಡಿದ, ಕಾವೇರಿಯ ಮೃಧು-ಮಾಧುರ್ಯ ಮೈದೋರಿ, ಸಹ್ಯಾದ್ರಿಯ ಅನಂತ, ಅಖಂಡ, ನಿಶ್ಚಲ ಮೌನ ಮೈದೋರಿ ಬೆಳೆದವರು ಇದರಿಂದಾಗಿ ಅವರ ಪಕ್ಷಿಕಾಸಿ, ನವಿಲು, ಕೊಳಲು, ಮುಂತಾದ ಕವನ ಸಂಕಲನಗಳಲ್ಲಿ ರಸಋಷಿ ಕವಿ ಕುವೆಂಪು ನಿಸರ್ಗದ ರಮಣೀಯ ಸೌಂದರ್ಯವನ್ನು ಬಣ್ಣಿಸಿರುವರು, ಇಂಥ ಋಷಿಕವಿ ಕನ್ನಡ ನಾಡಿನಲ್ಲಿ ಹುಟ್ಟಿದ್ದೇ ದನ್ಯವೆಂದು ಬರೆದಿದ್ದಾರೆ ಚಿಲಮಿ.

ಹೀಗೆ ವಿವಿಧ ಕಾವ್ಯ ಮತ್ತು ಗದ್ಯ ಕೃತಿಗಳ ಬಗೆಗೆ ವಿಮರ್ಶಾವಲೋಕನವನ್ನು ನಿಖರವಾಗಿಯೂ ಯಾವುದೇ ಭಿಡೇ ಮುರವತ್ತುಗಳಿಗೊಳಗಾಗದೇ ಮಾಡಿರುವರು. ಒಂದು ಕೃತಿಗೆ ಬೆಲೆಕಟ್ಟುವುದು; ಅದರ ಮೌಲ್ಯಮಾಪನ ಮಾಡುವುದು ಸಾಮಾನ್ಯವು ಅಲ್ಲ ಸಾಧುವೂ ಅಲ್ಲವೆಂಬುದನ್ನು ಸಾಧಿಸಿ ತೋರಿಸಿದದ್ದಾರೆ ಚಿಲಮಿಯವರು.

## ಅಡಿ ಟಿಪ್ಪಣಿಗಳು

೧. ಡಾ.ಆರ್.ಬಿ.ಚಿಲಮಿ, ಬತ್ತೀಸರಾಗ, ಪುಟ ಸಂಖ್ಯೆ-೫
೨. ಅದೇ ಪುಟ ಸಂಖ್ಯೆ-೪೬
೩. ಡಾ.ಆರ್.ಬಿ.ಚಿಲಮಿ (ಸ) ಅಲಬ್ಯೈರಿ ಕವಿಯ ಭಜನೆಯ ಪದಗಳು, ಪುಟ ಸಂಖ್ಯೆ-೬೮
೪. ಅದೇ ಪುಟ ಸಂಖ್ಯೆ-೭

# ಅಧ್ಯಾಯ-ನಾಲ್ಕು

## ಚಿಲಮಿ ಅವರ ಸಂಶೋಧನ ಮಹಾಪ್ರಬಂಧ: ಒಂದು ವಿವೇಚನೆ

ಹೊಸಗನ್ನಡ ಸಾಹಿತ್ಯದ, ಅದರಲ್ಲೂ ನವೋದಯ ಸಾಹಿತ್ಯ ಘಟ್ಟದ ಶ್ರೇಷ್ಠ ಕವಿಗಳಾದ ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಮಧುರಚೆನ್ನ, ಆನಂದಕಂದ, ಡಿ.ಎಸ್.ಕರ್ಕಿ ಹೀಗೆ ಹಲವಾರು ನವೋದಯ ಕವಿಗಳ ನೆರಳಿನಲ್ಲಿ ಬದುಕಿದ ಅನೇಕ ಕವಿಗಳಾಗಿದ್ದಾರೆ. ಇಂತಹ ಕವಿಗಳ ಜೊತೆಯಲ್ಲಿ ಬದುಕಿದ ಕವಿಗಳಲ್ಲಿ ಶರಣಕವಿ, ಭಕ್ತ ಕವಿ, ಅನುಭಾವ ಜೀವಿ ಬ.ಗಿ.ಯಲ್ಲಟ್ಟಿ ಅವರು ಒಬ್ಬರಾಗಿ ನಿಲ್ಲುತ್ತಾರೆ. ಇಂತಹ ಕವಿಯ ಸಮಗ್ರ ಸಾಹಿತ್ಯವನ್ನು ಕನ್ನಡ ಸಾಹಿತ್ಯ ಲೋಕಕ್ಕೆ ತೆರೆದು ತೋರಿಸುವ ಪ್ರಯತ್ನವನ್ನು ಆರ್.ಬಿ.ಚಿಲಮಿ ಅವರು ಮಾಡಿದ್ದಾರೆ. ಅವರು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಆಯ್ಕೆ ಮಾಡಿಕೊಂಡ ವಿಷಯ ಶರಣ ಕವಿ **"ಬ.ಗಿ.ಯಲ್ಲಟ್ಟಿ: ಸಮಗ್ರ ಸಾಹಿತ್ಯ."** ಕವಿಯೊಬ್ಬನ ಜೀವನ ಬರಹವನ್ನು ಬರೆಯುವುದಕ್ಕೆ ಲೇಖಕನಿಗೆ ಅವಶ್ಯವಿರುವುದು ಸಂಶೋಧನಾ ದೃಷ್ಟಿ, ಸಂಗ್ರಹಕನ ಶ್ರಮ, ವಸ್ತು ಮತ್ತು ವ್ಯಕ್ತಿಯ ಅಂತರಂಗ ಹೊಕ್ಕು ನೋಡುವ ಪ್ರೀತಿ, ಗೌರವ, ಉತ್ಸಾಹ ಇವೆಲ್ಲಾ ಸಂಶೋಧಕ ಆರ್.ಬಿ.ಚಿಲಮಿಯವರಲ್ಲಿ ಸಹಜವಾಗಿವೆ. ಚಿಲಮಿಯವರು ಯಾವುದೇ ಕಾರಣದಿಂದ ಬ.ಗಿ.ಯಲ್ಲಟ್ಟಿ ಅವರ ಸಾಹಿತ್ಯ ಕುರಿತು ಒಂದು ಮಹಾಪ್ರಬಂಧವನ್ನು ಸಿದ್ದಪಡಿಸದೇ ಹೋಗಿದ್ದರೆ, ಇಂತಹ ಎಲೆಮರೆಯ ಕವಿಯ ಸಾಹಿತ್ಯ ಇಂದು ಬೆಳಕು ಕಾಣುತ್ತಿರಲಿಲ್ಲ. ಶ್ರೀಯುತರ ಈ ಮಹಾಪ್ರಬಂಧ ಕುರಿತು ಸ್ಥೂಲವಾದ ವಿವೇಚನೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಕೈಗೊಂಡಿದ್ದೇನೆ.

ಆರ್.ಬಿ.ಚಿಲಮಿ ಅವರ ಮಹಾಪ್ರಬಂಧ "ಬ.ಗಿ.ಯಲ್ಲಟ್ಟಿ : ಸಮಗ್ರ ಸಾಹಿತ್ಯ" ಕರ್ನಾಟಕ ವಿಶ್ವವಿದ್ಯಾಲಯಕ್ಕೆ ೨೦೦೪ರಲ್ಲಿ ಸಾದರಪಡಿಸಿದ ಪಿಎಚ್.ಡಿ ಸಂಶೋಧನ

ಮಹಾಪ್ರಬಂಧ. ಅದು ೨೦೦೭ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಗೊಂಡಿದೆ. ಈ ಮಹಾಪ್ರಬಂಧಕ್ಕೆ ಸಂಶೋಧಕರಾದ ಡಾ.ವ್ಹಿ.ಎಸ್.ಮಾಳಿ ಅವರ ಸಮರ್ಥ ಮಾರ್ಗದರ್ಶನವಿದೆ. ಚಿಲಮಿಯವರು ತಮ್ಮ ಮಹಾಪ್ರಬಂಧದಲ್ಲಿ ಒಟ್ಟು ಎಂಟು ಅಧ್ಯಾಯಗಳನ್ನು ಮಾಡಿಕೊಂಡಿದ್ದಾರೆ.

ಈ ಮಹಾಪ್ರಬಂಧದ ಮೊದಲನೆಯ ಅಧ್ಯಾಯವು ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿಯಾಗಿದ್ದು, ಈ ಅಧ್ಯಾಯದಲ್ಲಿ ವಿಷಯದ ಆಯ್ಕೆ ಬಗ್ಗೆ ಚರ್ಚಿಸಿದ್ದು "ಬ.ಗಿ.ಯಲ್ಲಟ್ಟಿ: ಸಮಗ್ರ ಸಾಹಿತ್ಯ" ಕುರಿತು ಈ ವಿಷಯ ಏಕೆ ಆಯ್ಕೆ ಮಾಡಿಕೊಂಡಿದ್ದೇನೆ ಎಂದು ತಿಳಿಯಪಡಿಸುತ್ತಾರೆ. "ಬ.ಗಿ.ಯಲ್ಲಟ್ಟಿಯವರು" ನವೋದಯ ಯುಗದ ಅನುಭಾವ ಕವಿ. ಅವರ ಸಾಹಿತ್ಯ ಕುರಿತು ವಸ್ತುನಿಷ್ಠ ವಿಮರ್ಶೆ ಹೊರಬರಲಿಲ್ಲ. ಇದಕ್ಕೆ ಕಾರಣವೂ ಉಂಟು, ಕುವೆಂಪು, ಬೇಂದ್ರೆ, ಮಾಸ್ತಿ, ಕಾರಂತ, ವಿನಾಯಕರಂತಹ ದೈತ್ಯ ಪ್ರತಿಭೆಗಳ ಬೆಳಕಿನಲ್ಲಿ ಎಷ್ಟೋ ಹಣತೆಗಳು ಕಾಣುವುದೇ ಇಲ್ಲ. ಹುಣ್ಣಿಮೆಯ ಬೆಳದಿಂಗಳಿನಲ್ಲಿ ಉಜ್ವಲ ನಕ್ಷತ್ರಗಳು ಮರೆಯಾಗುವಂತೆ, ಚಂದ್ರಿಕೆಯಲ್ಲಿರುವಷ್ಟು ಪ್ರಖರತೆ ನಕ್ಷತ್ರಗಳ ಬೆಳಗಿನಲ್ಲಿ ಇರಲಿಕ್ಕಿಲ್ಲ, ಆದರೆ ಒಂದೊಂದು ನಕ್ಷತ್ರದ ಬೆಳಕಿಗೂ ಒಂದೊಂದು ವೈಶಿಷ್ಟ್ಯವಿದೆ. ಅದನ್ನು ಗಮನವಿಟ್ಟು ನೋಡಿದರೆ ಅರ್ಥವಾಗುತ್ತದೆ. ಕೃಷ್ಣಾತೀರದ ಬ.ಗಿ.ಯಲ್ಲಟ್ಟಿ, ಈಶ್ವರ ಸಣಕಲ್ಲ, ಭುಜೇಂದ್ರ ಮಹೀಶವಾಡಿ ಇವರು ಮರೆಯಲಾಗದ ಕವಿಗಳು. ಕನ್ನಡ ಸಾಹಿತ್ಯ ಚರಿತ್ರೆಯನ್ನು ರಚಿಸುವಾಗ ಇವರನ್ನು ಯಾವ ಕಾರಣಕ್ಕೂ ಉಪೇಕ್ಷಿಸಲಾಗದು, ಮಿರ್ಜಿ ಅಣ್ಣಾರಾಯ, ಸತ್ಯಕಾಮ, ರಾವ್‌ಬಹದ್ದೂರ, ದು.ನಿಂ.ಬೆಳಗಲಿಯವರ ಸಾಲಿನಲ್ಲಿ ಖಂಡಿತವಾಗಿಯೂ ಇವರು ಸೇರ್ಪಡೆಯಾಗುತ್ತಾರೆ"[೧]

ಈ ವಿಷಯವನ್ನು ಆಯ್ಕೆ ಮಾಡಿಕೊಳ್ಳಲು ಮುಖ್ಯ ಕಾರಣ ನವೋದಯ ಕಾಲದಲ್ಲಿ ಬದುಕಿದ ಬ.ಗಿ.ಯಲ್ಲಟ್ಟಿ ದೈತ್ಯ ಕವಿಗಳ ಮುಂದೆ ಎಲೆಮರೆಯ ಕಾಯಿ ಆಗಿದ್ದು, ಅವರ ಸಾಹಿತ್ಯವನ್ನು ವಸ್ತು ನಿಷ್ಠವಾಗಿ ವಿಮರ್ಶೆಗೆ ಒಳಪಡಿಸಿ, ಕನ್ನಡ ಸಾಹಿತ್ಯದಲ್ಲಿ ಅವರ ಸ್ಥಾನವನ್ನು ಗುರುತಿಸಲು ಅವರು ಈ ವಿಷಯ ಆಯ್ಕೆ ಮಾಡಿಕೊಂಡಿರುವುದು ತಿಳಿದು ಬರುತ್ತದೆ. ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ ಹಲವಾರು ಕವಿಗಳಲ್ಲಿ ಯಲ್ಲಟ್ಟಿ ಅವರೂ ಒಬ್ಬರು ಅವರ ಸಾಹಿತ್ಯ ಕೃಷಿಯನ್ನು ಮತ್ತು ಅವರ ಬದುಕನ್ನು ಸಮಗ್ರವಾಗಿ ಅಧ್ಯಯನ ಮಾಡಿ ಅವರ ಸಾಹಿತ್ಯಕ್ಕೆ ಯೋಗ್ಯ ಬೆಲೆ ಕಟ್ಟುವುದು, ಇತರ ಸಾಹಿತಿಗಳೊಂದಿಗೆ ಅವರನ್ನು ಹೋಲಿಸಿ ನೋಡುವುದು, ಕನ್ನಡ ಸಾಹಿತ್ಯದಲ್ಲಿ ಮರೆತುಹೋದ ಅವರ ಕೃತಿಗಳನ್ನು ಮತ್ತೆ ತೆರೆದು ತೋರಿಸುವುದು ಸಂಶೋಧಕರ ಆಸಕ್ತಿಯಾಗಿದೆ. ಅವರ ಜೀವನ ಮತ್ತು ಸಾಹಿತ್ಯವನ್ನು ವಿವರವಾಗಿ ಪರಿಶೀಲಿಸಿ ಮೌಲ್ಯಮಾಪನ ಮಾಡುವುದು ಈ ಮಹಾಪ್ರಬಂಧದ ಮುಖ್ಯ ಉದ್ದೇಶಗಳಲ್ಲೊಂದು ಎಂದು ಚಿಲಮಿ ಅವರು ತಿಳಿಯಪಡಿಸುತ್ತಾರೆ.

ಈ ಮಹಾಪ್ರಬಂಧದಲ್ಲಿ ಒಟ್ಟು ಎಂಟು ಅಧ್ಯಾಯಗಳನ್ನು ಮಾಡಿಕೊಂಡ ಚಿಲಮಿ ಅವರು ಹೆಚ್ಚಿನ ವಿಷಯವನ್ನು ಮತ್ತು ಯಲ್ಲಟ್ಟಿಯವರ ಬದುಕು ಮತ್ತು ಸಾಹಿತ್ಯವನ್ನು ಹಲವಾರು ಕವಿಗಳು, ವಿದ್ವಾಂಸರು ನೀಡಿದ ಅಭಿಪ್ರಾಯಗಳ ಜೊತೆಗೆ ಚಿಲಮಿ ಅವರು ಯಲ್ಲಟ್ಟಿಯವರೊಂದಿಗೆ ನಡೆಯಿಸಿದ ಸಂದರ್ಶನವನ್ನು ಕೊನೆಗೆ ಅನುಬಂಧದಲ್ಲಿ ತಿಳಿಯಪಡಿಸಿದ್ದಾರೆ. ಒಟ್ಟು ಯಲ್ಲಟ್ಟಿಯವರ ಸಮಗ್ರ ಸಾಹಿತ್ಯವನ್ನು ತಮ್ಮ ಮಹಾಪ್ರಬಂಧದಲ್ಲಿ ಅಧ್ಯಯನಕ್ಕೊಳಪಡಿಸಿದ್ದಾರೆ.

ಬ.ಗಿ.ಯಲ್ಲಟ್ಟಿ ಅವರ ಜೀವನ ದರ್ಶನವು, ಎರಡನೆಯ ಅಧ್ಯಾಯದಲ್ಲಿ ಕಂಡುಬರುತ್ತದೆ. ಈ ಅಧ್ಯಾಯದಲ್ಲಿ ಯಲ್ಲಟ್ಟಿಯವರ ಬಾಲ್ಯ, ಶಿಕ್ಷಣ, ಸ್ವಾತಂತ್ರ ಹೋರಾಟ, ಹಿರಿಯ ಸಾಹಿತಿಗಳ ಒಡನಾಟ, ವೈವಾಹಿಕ ಬದುಕು, ಅಧ್ಯಾಪನ ಪರ್ವ, ಹಟ ಬಿಡದ ಛಲಗಾರ, ದೇವನ ಮನೆ, ವೃತ್ತಿಯಿಂದ ನಿವೃತ್ತಿ, ಸಾಧನೆ ಸಿದ್ಧಿ ಹೀಗೆ ಯಲ್ಲಟ್ಟಿಯವರ ಜೀವನದ ಪ್ರತಿಯೊಂದು ಸಂಗತಿಗಳನ್ನು ವಿವರವಾಗಿ ವಿವರಿಸಿದ್ದಾರೆ.

ಯಲ್ಲಟ್ಟಿಯವರ ವ್ಯಕ್ತಿತ್ವವನ್ನು ತಿಳಿಯಪಡಿಸುತ್ತಾ ಗಾಳಿಗೆ ಬಳುಕುವ ದೇಹ, ಸ್ಫಟಿಕದಂತಹ ಬಣ್ಣ, ಮಧ್ಯಮ ಎತ್ತರ, ಶುಭ್ರ ಬಟ್ಟೆಗಳು, ತಲೆಯ ಮೇಲೆ ಗಾಂಧೀ ಟೋಪಿಗೆ ಎಂಬತ್ತೆರಡರ ಹರೆಯದಲ್ಲೂ ಬದುಕಿನ ಅದಮ್ಯ ಉತ್ಸಾಹ ಕಂಡರೆ ಕೈ ಮುಗಿಯಬೇಕೆನ್ನುವಷ್ಟು ವಿನಯಶೀಲ ವ್ಯಕ್ತಿತ್ವ, ಮಾತು ಮಾತುಗಳಲ್ಲಿ ಅನುಭಾವದ ಪರಿಮಳ ಮನಕ್ಕೆ ಮುದ ನೀಡುವುದು, ದೇವನ ಮನೆಯ ಕವಿಯೆಂದೇ ಖ್ಯಾತರಾದ ಯಲ್ಲಟ್ಟಿಯವರು ಬದುಕಿನಲ್ಲಿ ನಲಿವಿಗಿಂತಲೂ ಹೆಚ್ಚು ನೋವು ಉಂಡು ಮಾಗಿದವರು.

ಇವರ ಪೂರ್ಣ ಹೆಸರು ಬಸವರಾಜ ಗಿರಿಮಲ್ಲಪ್ಪ ಯಲ್ಲಟ್ಟಿ, ಯಲ್ಲಟ್ಟಿಯವರು ಬನಹಟ್ಟಿಯ ಜೀವಂತ ಪುಷ್ಪ ಅವರ ಬದುಕು, ಪರಿಸರ, ಶಿಕ್ಷಣ, ಧ್ಯೇಯ-ಧೋರಣೆ, ಸಾಧನೆ-ಸಿದ್ಧಿ ಮುಂತಾದವುಗಳ ಕುರಿತು ಸಂಶೋಧಕ ಚಿಲಮಿ ಅವರು ಅಧ್ಯಯನವನ್ನು ಮಾಡಿ ನೇರ ನಿರೂಪಣೆಯೊಂದಿಗೆ ವಿಷಯವನ್ನು ಪ್ರಸ್ತುತಪಡಿಸಿದ್ದಾರೆ. ಯಲ್ಲಟ್ಟಿಯವರು ಗಾಂಧಿ ತತ್ವಕ್ಕೆ ಬದ್ಧರಾಗಿ ಪ್ರಾಮಾಣಿಕತೆಗಳನ್ನು, ಆದರ್ಶವಾಗಿಟ್ಟುಕೊಂಡು ಅವುಗಳನ್ನು ಅಳವಡಿಸಿಕೊಳ್ಳುವುದರ ಮೂಲಕ ಆಧ್ಯಾತ್ಮಕವಿಯೆಂದೂ, ಅನುಭಾವ ಕವಿಯೆಂದೂ, ಕಾವ್ಯ, ವಚನ, ವಚನವ್ಯಾಖ್ಯಾನ, ಜೀವನ ಚರಿತ್ರೆಗಳು, ಪ್ರಬಂಧ, ವೈಚಾರಿಕ ಲೇಖನಗಳು, ರೂಪಕಗಳು, ಚರಿತ್ರೆ ಎಲ್ಲ ಸಾಹಿತ್ಯ ಪ್ರಕಾರಗಳಲ್ಲೂ ಕೃತಿ ರಚನೆ ಮಾಡಿದ್ದಾರೆಂದು ಚಿಲಮಿಯವರು ತಿಳಿಸುತ್ತಾರೆ. ಎಂ.ಎಸ್.ಸುಂಕಾಪುರ, ಎಸ್.ಸಿ.ನಂದಿಮಠ, ವಿ.ಕೃ.ಗೋಕಾಕ, ರಂ.ಶ್ರೀ.ಮುಗಳಿ ಹಲವಾರು ಕವಿ ವಿದ್ವಾಂಸರ ಕೈಯಲ್ಲಿ ಶಿಕ್ಷಣ ಪಡೆದು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದವರು. ಇಪ್ಪತ್ತೆರಡು ವರ್ಷ ವಯಸ್ಸಿನ ಯುವಕನಾಗಿದ್ದಾಗ

ಬ.ಗಿ.ಯಲ್ಲಟ್ಟಿಯವರು ಆಂಗ್ಲರ ಲಾಠಿ ರುಚಿ ತಿಂದು ಜೈಲು ವಾಸ ಅನುಭವಿಸಿದವರು. ಸಾಹಿತಿಗಳ ಒಡನಾಟದಲ್ಲಿ ಅನೇಕ ಕವನಗಳನ್ನು ರಚಿಸಿ ಪ್ರಕಟಿಸಿದರು. ಯಲ್ಲಟ್ಟಿಯವರು ಸಾಹಿತ್ಯ ಕೃಷಿ ಇಲ್ಲಿಂದಲೇ ಪ್ರಾರಂಭವಾಯಿತು. "ಬ.ಗಿ.ಯಲ್ಲಟ್ಟಿಯವರು ಸಾಂಗಲಿಯ ವಿಲ್ಲಿಂಗ್ಡನ್ ಕಾಲೇಜಿಲ್ಲಿ ಸ್ನಾತಕ ಶಿಕ್ಷಣಕ್ಕೆ ಪ್ರವೇಶ ಪಡೆದಿದ್ದರು. ಆಗ ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ.ವಿ.ಕೃ.ಗೋಕಾಕ ವಿಲ್ಲಿಂಗ್ಡನ್ ಕಾಲೇಜಿನ ಪ್ರಾಚಾರ್ಯರಾಗಿದ್ದರು. ಖ್ಯಾತ ಲೇಖಕ ರಂ.ಶ್ರೀ.ಮುಗಳಿಯವರು ಕನ್ನಡ ಅಧ್ಯಾಪಕರಾಗಿದ್ದರು. ಈ ದಿಗ್ಗಜರಿಬ್ಬರ ಸಹವಾಸಕ್ಕೆ ಆಸೆಪಟ್ಟು ಯಲ್ಲಟ್ಟಿ ವಿಲ್ಲಿಂಗ್ಡನ್ ಕಾಲೇಜಿಗೆ ಸೇರಿಕೊಂಡರು."[೨] ಯಲ್ಲಟ್ಟಿಯವರು ಉನ್ನತ ಶಿಕ್ಷಣ ಪಡೆದುಕೊಳ್ಳುವ ಹಲವಾರು ತೊಂದರೆಗಳು ಆ ಸಮಯದಲ್ಲಿ ಬಂದುದರಿಂದ ಅವರಿಗೆ ಮುಂದಿನ ಶಿಕ್ಷಣ ಪಡೆದುಕೊಳ್ಳಲು ಸಾಧ್ಯವಾಗಲಿಲ್ಲ. "ಅದೇ ಕಾಲಕ್ಕೆ ದೇಶವನ್ನೆಲ್ಲಾ ವ್ಯಾಪಿಸಿದ ಚಲೇಜಾವ ಚಳುವಳಿಯ ಬಿರುಗಾಳಿ ಯಲ್ಲಟ್ಟಿಯವರನ್ನು ಸುತ್ತಿಕೊಂಡಿತು. ಗಾಂಧೀಜಿಯವರ ಕರೆಯ ಮೇರೆಗೆ ಯುವಕರು ಕಾಲೇಜು ಬಿಟ್ಟು ಹೊರಬಂದರು. ಶಾಲಾ ಕಾಲೇಜುಗಳು ಮುಚ್ಚಿದವು"[೩] ಈ ಕಾರಣಕ್ಕಾಗಿ ಯಲ್ಲಟ್ಟಿಯವರ ಶಿಕ್ಷಣ ಮುಂದುವರಿಯದೆ ಹೋಯಿತು.

ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದ ಇವರು ಹಲವು ಬಾರಿ ಆಂಗ್ಲ ಪೋಲೀಸರ ಕೈಯಿಂದ ಪೆಟ್ಟು ತಿಂದರು. ಆಗ ಯಲ್ಲಟ್ಟಿ ಅವರು ೨೨ ವರ್ಷದ ತರುಣರು. ಚಳುವಳಿಯ ಕಾವು ಇಳಿದ ಮೇಲೆ ಮುಚ್ಚಿದ ಶಾಲಾ-ಕಾಲೇಜುಗಳು ಮತ್ತೆ ಪ್ರಾರಂಭವಾದವು. ಯಲ್ಲಟ್ಟಿಯವರು ಸಹೋದರರ ಒತ್ತಾಯಕ್ಕೆ ಮಣಿದು ಕಾಲೇಜಿಗೆ ವಿದಾಯ ಹೇಳಿ ವ್ಯಾಪಾರದಲ್ಲಿ ತೊಡಗಿದರು. ವೃತ್ತಿಯಲ್ಲಿ ಬಿಡುವು ಸಿಕ್ಕಾಗಲೆಲ್ಲಾ. ಓದುವ, ಬರೆಯುವ ಹವ್ಯಾಸ ರೂಢಿಸಿಕೊಂಡಿದ್ದರು. ಜಯಂತಿ, ಜಯಕರ್ನಾಟಕ, ಪ್ರಬುದ್ಧ ಕರ್ನಾಟಕ ಪತ್ರಿಕೆಗಳಿಗೆ ಹಾಗೂ ಮನೋಹರ ಗ್ರಂಥಮಾಲೆ, ಮಿಂಚಿನಬಳ್ಳಿ, ಮುಂತಾದ ಪ್ರಕಾಶನ ಸಂಸ್ಥೆಗಳಿಗೆ ಚಂದಾದಾರರಾದರು. ನಂತರ ಇವರ ಸಾಹಿತ್ಯದ ಓದು ವಿಫುಲವಾಗಿ ಬೆಳೆಯಿತು. "೧೯೪೪ರಲ್ಲಿ ಧಾರವಾಡ ಆಕಾಶವಾಣಿ ಕೇಂದ್ರದ ಕಾರ್ಯಕ್ರಮದಲ್ಲಿ ಯಲ್ಲಟ್ಟಿಯವರು 'ಕೋಗಿಲೆ' ಎಂಬ ಕವಿತೆಯನ್ನು ಓದಿದಾಗ ಬೇಂದ್ರೆಯವರು ಬೆನ್ನು ಚಪ್ಪರಿಸಿದ್ದುದನ್ನು ಕವಿ ತಮ್ಮ ಇಳಿ ವಯಸ್ಸಿನಲ್ಲಿಯೂ ನೆನಪಿಸಿಕೊಳ್ಳುತ್ತಾರೆ."[೪] ಎಂದು ಚಿಲಮಿಯವರು ದಾಖಲಿಸುತ್ತಾರೆ.

ವೈವಾಹಿಕ ಜೀವನಕ್ಕೆ ಇಪ್ಪತ್ತಾರನೇ ವರ್ಷದಲ್ಲಿ ಕಾಲಿರಿಸಿದ ಯಲ್ಲಟ್ಟಿಯವರದು ಅವಿಭಕ್ತ ಕುಟುಂಬ. ಈ ಕುಟುಂಬ ಸಮೃದ್ಧವಾಗಿ ಸಂಪತ್ತಿನಿಂದ ಕೂಡಿದ ಮನೆಯಾಗಿದ್ದರೂ ಮುಂದೆ ಅನೇಕ ಕಷ್ಟ-ನಷ್ಟಗಳನ್ನು ಅನುಭವಿಸಬೇಕಾಗಿ ಬಂತು ಎಂಬುದನ್ನು ಚಿಲಮಿಯವರು ಸರಳವಾಗಿ, ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಯಲ್ಲಟ್ಟಿಯವರು ಶಿಕ್ಷಣ ಪಡೆಯುವ ಕಾಲಕ್ಕೆ ಅನೇಕ ಕಷ್ಟಗಳನ್ನು ಅನುಭವಿಸಿದ್ದಾರೆ. ನಂತರ ತಮ್ಮ ಶಿಕ್ಷಕ ವೃತ್ತಿಯನ್ನು ಪ್ರಾರಂಭಿಸಿ ಗುರುಗಳ,

ಜನಗಳ, ಶಿಷ್ಯವರ್ಗಗಳ, ಅವರ ಸಮಕಾಲಿನ ಕವಿಗಳ ಮೆಚ್ಚುಗೆ ಪಡೆದು ಉತ್ತಮ ಶಿಕ್ಷಕರಾಗಿ ಹೆಸರುಗಳಿಸಿದರು. ಹೀಗೆ ಹಟ ಬಿಡದ ಛಲಗಾರನಂತಹ ಯಲ್ಲಟ್ಟಿಯವರ ಬದುಕಿನ ಹಲವು ಸೂಕ್ಷ್ಮ ಸಂಗತಿಗಳನ್ನು ಸಂಶೋಧಕ ಚಿಲಮಿ ತಮ್ಮ ಮಹಾಪ್ರಬಂಧದಲ್ಲಿ ದಾಖಲಿಸುವ ಪ್ರಾಮಾಣಿಕ ಪ್ರಯತ್ನವನ್ನು ಈ ಎರಡನೆಯ ಅಧ್ಯಾಯದಲ್ಲಿ ಮಾಡಿದ್ದಾರೆ.

ಯಾವುದೇ ಕವಿಯ ಕಾವ್ಯ ರಚನೆಗೆ ಪ್ರೇರಣೆಯಾಗುವುದು ತನ್ನ ಸುತ್ತ ಮುತ್ತಲಿನ ಪರಿಸರ ಮತ್ತು ತನ್ನ ಹಿರಿಯ ಮತ್ತು ಸಮಕಾಲೀನ ಕವಿಗಳು, ಯಲ್ಲಟ್ಟಿಯವರಿಗೂ ಈ ರೀತಿಯ ಸುತ್ತಲಿನ ಪರಿಸರ ಮತ್ತು ಕವಿಗಳು ಪ್ರಭಾವ ಬೀರಿದ್ದಾರೆ. ಬನಹಟ್ಟಿ ಪರಿಸರ ಇವರ ಮೇಲೆ ಗಾಢವಾದ ಪ್ರಭಾವ ಬೀರಿದೆ. "ಬಹುಮುಖ ಪ್ರತಿಭೆಯ ತಮ್ಮಣ್ಣಪ್ಪ ಚಿಕ್ಕೋಡಿ ಇದೇ ಪರಿಸರದವರು. ವಚನಪಿತಾಮಹ ಫ.ಗು.ಹಳಕಟ್ಟಿಯವರು ಬದುಕಿಗೆ ಬಣ್ಣ ಕೊಟ್ಟ ಶ್ರೇಯಸ್ಸು ಬನಹಟ್ಟಿಯದು. ವಚನಕಾರ ಶ್ರೀ ಕಾಡಸಿದ್ಧೇಶ್ವರ ಎಲ್ಲಿಯವನೆಂಬುದು ಸ್ಪಷ್ಟವಾಗಿ ತಿಳಿಯದು. ಈತ ಬನಹಟ್ಟಿಗೆ ಬಂದಿದ್ದನೆಂದು ಅಲ್ಲಿಯ ಜನ ಹೇಳುತ್ತಾರೆ. ಷಟ್ಪದಿ ಕಾವ್ಯಗಳನ್ನು ರಚಿಸಿದ ರತ್ನಪ್ಪ ಕೋಪರ್ಡೆ ಇಲ್ಲಿಯವರೆ. ಡಾ.ಭುಜೇಂದ್ರ ಮಹೀಶವಾಡಿ, ಈಶ್ವರ ಸಣಕಲ್ಲ, ಉತ್ತರ ಕರ್ನಾಟಕದ ಖ್ಯಾತ ಕಾದಂಬರಿಕಾರ ದು.ನಿಂ.ಬೆಳಗಲಿ– ಈ ಪರಿಸರದ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು."[೫]

ಈ ಕವಿಗಳೆಲ್ಲಾ ಯಲ್ಲಟ್ಟಿಯವರಿಗೆ ಸಾಹಿತ್ಯರಚನೆ ಮಾಡುವಲ್ಲಿ ಪ್ರೇರಕ ಶಕ್ತಿಗಳಾಗಿದ್ದರು ಎಂದು ಸಂಶೋಧಕ ಚಿಲಮಿಯವರು ತಿಳಿಯಪಡಿಸುತ್ತಾರೆ. ಅಲ್ಲದೆ ನವೋದಯದ ಶ್ರೇಷ್ಠ ಅನುಭಾವಿಕವಿ ಮಧುರಚೆನ್ನರು ಯಲ್ಲಟ್ಟಿಯವರ ಕಾವ್ಯ ರಚನೆಗೆ ದಾರಿದೀಪವಾಗಿದ್ದರು. 'ಜಗವೆಲ್ಲ ನಗುತಿರಲಿ ಜಗದಳುವು ನನಗಿರಲಿ' ಎಂಬ ಹಾಡಿನ ಕವಿ ಈಶ್ವರ ಸಣಕಲ್ಲರು ಯಲ್ಲಟ್ಟಿಯವರಿಗೆ ಸ್ಫೂರ್ತಿಯ ಕಾವ್ಯ ಗುರುವಾಗಿದ್ದರು. ಎಂಬುದನ್ನು. ಚಿಲಮಿಯವರು ತಮ್ಮ ಮಹಾಪ್ರಬಂಧದ ಮೂರನೆಯ ಅಧ್ಯಾಯದಲ್ಲಿ ವಿವರಿಸಿದ್ದಾರೆ.

ಬ.ಗಿ.ಯಲ್ಲಟ್ಟಿಯವರ ಪ್ರಕಟಿತ ಸಾಹಿತ್ಯ ಮತ್ತು ಕಾವ್ಯ ಕೃತಿಗಳ ಬಗೆಗೆ ನಾಲ್ಕನೆಯ ಅಧ್ಯಾಯದಲ್ಲಿ ವಿಶ್ಲೇಷಿಸಿದ್ದಾರೆ. ಯಲ್ಲಟ್ಟಿಯವರು ತಮ್ಮ ಸಾಹಿತ್ಯ ಕೃಷಿಯನ್ನು ಕಾವ್ಯದಿಂದಲೇ ಆರಂಭಿಸಿದರೂ ಕಾವ್ಯವನ್ನು ಹೆಚ್ಚಿಗೆ ಬರೆದವರಲ್ಲ ಅವರಲ್ಲಿ ಗದ್ಯ ಸಾಹಿತ್ಯ ಹೆಚ್ಚಾಗಿ ಕಂಡುಬರುತ್ತದೆ. "ಮಧುರಚೆನ್ನರು ನಲ್ಲನ ಹುಡುಕಾಟವನ್ನು ಕಾವ್ಯದ ವಸ್ತುವಾಗಿಸಿ 'ನನ್ನನಲ್ಲ' ಎಂಬ ಕಾವ್ಯ ರಚಿಸಿದರು. ವರಕವಿ ಬೇಂದ್ರೆಯವರು ಪಟ್ಟಪಾಡೆಲ್ಲವನ್ನೂ ಹುಟ್ಟು ಹಾಡಾಗಿಸಿ 'ಸಖಿಗೀತ'ವನ್ನು ಸೃಷ್ಟಿಸಿದರು ಇದೇ ಹಾದಿಯ ಮೇಲೆ ನಡೆದ ಇನ್ನೊಬ್ಬ ಕವಿ ಬ.ಗಿ. ಯಲ್ಲಟ್ಟಿ ಇವರು ಬದುಕಿನಲ್ಲಿ ಎದುರಾದ ಕಷ್ಟ–ನೋವುಗಳಿಗೆ ಕಾವ್ಯದ ದೀಕ್ಷೆ ಕೊಟ್ಟರು. ಯಲ್ಲಟ್ಟಿಯವರು ತಮ್ಮ ಕಾವ್ಯ ಜೀವನದ ೫೦ ವರ್ಷಗಳಲ್ಲಿ ಕೇವಲ ನಾಲ್ಕು ಕವನ

ಸಂಕಲನಗಳನ್ನು ಕೊಟ್ಟಿರುವರು. 'ನನ್ನಹಾಡು' (೧೯೫೦), 'ರಸಿಕ ಪಕ್ಷಿ' (೧೯೫೯), 'ಅಗ್ನಿದೀಕ್ಷೆ' (೧೯೭೭), 'ಯಾವ ಹಾಡ ಹಾಡಲಿ' (೧೯೯೮) ಎಂಬ ಕವನ ಸಂಕಲನಗಳಲ್ಲಿಯ ಒಟ್ಟು ೧೨೧ ಕವನಗಳನ್ನು ಒತ್ತಟ್ಟಿಗೆ ಸೇರಿಸಿ ಬನಹಟ್ಟಿ ವಾತ್ಸಲ್ಯ ಪ್ರಕಾಶನ ೨೦೦೧ರಲ್ಲಿ ಯಲ್ಲಟ್ಟಿಯವರ 'ಸಮಗ್ರ ಕಾವ್ಯ'ವನ್ನು ಪ್ರಕಟಿಸಿದೆ"[೬] ಎಂದು ಹೇಳಿರುವ ಸಂಶೋಧಕರು ಒಂದೊಂದು ಕಾವ್ಯ ಸಂಕಲನವನ್ನು ವಿಮರ್ಶೆಗೆ ಒಳಪಡಿಸಿ ಕವನಗಳನ್ನು ಉದಾಹರಣೆಯಾಗಿ ಕೊಡುತ್ತ ಕಾವ್ಯದ ಒಲವು-ನಿಲುವುಗಳನ್ನು, ಅದರ ಒಳನೋಟಗಳನ್ನು ಸೂಕ್ಷ್ಮವಾಗಿ ಗುರುತಿಸಿ ಅದರ ಬೆಲೆ ಕಟ್ಟಲು ಪ್ರಯತ್ನಿಸಿದ್ದಾರೆ. ಅಲ್ಲದೆ ಯಲ್ಲಟ್ಟಿಯವರ ವಚನ ಸಾಹಿತ್ಯವನ್ನು ಅಧ್ಯಾಯ ನಾಲ್ಕರಲ್ಲಿ ವಿಮರ್ಶೆಗೆ ಒಳಪಡಿಸಿ ಅವುಗಳನ್ನು ಉದಾಹರಿಸುತ್ತಾ ಅವುಗಳ ಮಹತ್ವವನ್ನು ಹೇಳಿದ್ದಾರೆ. ಒಟ್ಟಿನಲ್ಲಿ ಈ ಅಧ್ಯಾಯದಲ್ಲಿ ಯಲ್ಲಟ್ಟಿಯವರ ಕಾವ್ಯ ಸಂಕಲನ ಮತ್ತು ವಚನಗಳನ್ನು ವಿವರವಾಗಿ ತಿಳಿಸಿ ಯಲ್ಲಟ್ಟಿಯವರು ಒಬ್ಬ ಶ್ರೇಷ್ಠ, ನವೋದಯ ಕಾಲದ ಆಧ್ಯಾತ್ಮಿಕ ಅನುಭಾವಿಕ ಕವಿಯೆಂದು ಸಾರಲು ಬೇಕಾದ ಸಾಹಿತ್ಯಿಕ ಅಂಶಗಳನ್ನು ಕ್ರೋಢೀಕರಿಸುವಲ್ಲಿ ಸಂಶೋಧಕರು ಯಶಸ್ವಿಯಾಗಿದ್ದಾರೆ.

ಯಲ್ಲಟ್ಟಿಯವರ ಗದ್ಯ ಮತ್ತು ಇತರ ಕೃತಿಗಳು ಎಂಬ ಐದನೆಯ ಅಧ್ಯಾಯದಲ್ಲಿ ಸಂಶೋಧಕ ಚಿಲಮಿಯವರು ಯಲ್ಲಟ್ಟಿಯವರ ಒಟ್ಟು ಗದ್ಯ ಸಾಹಿತ್ಯವನ್ನು ವಿವರಣೆಯ ಮೂಲಕ ಹೇಳಲು ಪ್ರಯತ್ನಿಸಿದ್ದಾರೆ. ಯಲ್ಲಟ್ಟಿಯವರ ಕಾವ್ಯಕ್ಕಿಂತ ಗದ್ಯ ಬರಹವು ಹೆಚ್ಚಾಗಿ ಕಂಡುಬರುತ್ತದೆ. ಜೀವನ ಚರಿತ್ರೆ, ವ್ಯಾಖ್ಯಾನ, ಪ್ರಬಂಧ, ವಿಮರ್ಶೆ ವೈಚಾರಿಕ ಲೇಖನಗಳು- ಇವು ಅವರ ಗದ್ಯ ಸಾಹಿತ್ಯದ ವಿವಿಧ ಪ್ರಕಾರಗಳಾಗಿವೆ. ಒಟ್ಟು ಹನ್ನೊಂದು ಗದ್ಯ ಕೃತಿಗಳನ್ನು ಪ್ರಕಟಿಸಿದ್ದಾರೆ. ಪ್ರಕಟಿತ ಕೃತಿಗಳಲ್ಲಿ ಗದ್ಯದ ಪಾಲು ಹೆಚ್ಚಿದೆ. ಯಲ್ಲಟ್ಟಿಯವರ ಗದ್ಯಕ್ಕೆ ಲಯವಿದೆ, ಜೀವನ ವೃತ್ತಾಂತದಂಥ ಸೃಜನೇತರ ಬರಹಗಳಲ್ಲೂ ಅವರು ಸಿದ್ಧಹಸ್ತರು, ಚಿಲಮಿ ಅವರು ಹೇಳುವಂತೆ "ಬ.ಗಿ.ಯಲ್ಲಿಟ್ಟಿಯವರ ಸಾಹಿತ್ಯ ವೈವಿಧ್ಯಮಯವಾದದು, ಕಾವ್ಯ ಅವರ ಆಸಕ್ತಿಯ ಕ್ಷೇತ್ರ: ಗದ್ಯ ದುಡಿಮೆಯ ಕ್ಷೇತ್ರ. ಅವರು ಕುವೆಂಪು ಅವರಂತೆ ಗದ್ಯಕ್ಕೆ ಕಾವ್ಯದ ದೀಕ್ಷೆ ಕೊಟ್ಟರು. ಯಾವುದನ್ನೇ ಆಗಲಿ, ಯಾವುದನ್ನೇ ಮಾಡಲಿ ಅಲ್ಲಿ ಒಪ್ಪ-ಓರಣಗಳಿರುತ್ತವೆ. ಅವರದು ತೂಕಬದ್ಧ ಮಾತು. ತೂಕಬದ್ಧ ಬರಹ. ಅಳೆದು ಸುರಿದು, ನೂರೊಂದು ಸಲ ವಿಚಾರಮಾಡಿ, ನಂತರವೇ ವ್ಯಾಪಾರ ಮಾಡುವ ಬಂಗಾರದಂಗಡಿಯವನ ಹಾಗೆ"[೭] ಯಲ್ಲಟ್ಟಿಯವರ ಗದ್ಯವು ಕಾವ್ಯವನ್ನು ಹೋಲುತ್ತದೆ ಎಂದು ಸಂಶೋಧಕರು ತಿಳಿಸುತ್ತಾರೆ.

ಶರಣಬಸವ ದರ್ಶನ, ಮಹಾದಾಸೋಹಿ ಶ್ರೀ ಶರಣಬಸವೇಶ್ವರರು, ಉರಿಯುಂಡ ಕರ್ಪೂರ, ಅಥಣಿಯ ಮುರುಘೇಂದ್ರ ಶಿವಯೋಗಿಗಳು ಈ ಗದ್ಯ ಕೃತಿಗಳ ವೈಶಿಷ್ಟ್ಯವನ್ನು ಸಂಶೋಧಕರು ಸವಿಸ್ತಾರವಾಗಿ ಹೇಳಿದ್ದಾರೆ. ವಚನ ವ್ಯಾಖ್ಯಾನ ಇನ್ನಿತರ ಕೃತಿಗಳು ಗದ್ಯ

ಸಾಹಿತ್ಯದಲ್ಲಿ ಯಲ್ಲಟ್ಟಿಯವರ ಸಾಧನೆ ಸಿದ್ಧಿಯನ್ನು ಸ್ಥಾಯಿಯಾಗಿ ನೆಲೆಗೊಳಿಸಿವೆಯೆಂದು ಸಂಶೋಧಕರು ತಮ್ಮ ಮಹಾಪ್ರಬಂಧದ ಐದನೆಯ ಅಧ್ಯಾಯದಲ್ಲಿ ವಿಮರ್ಶಿಸಿದ್ದಾರೆ.

ಸಾಹಿತ್ಯ ರಚನೆಯ ಗೀಳು ಎಲ್ಲರಿಗೂ ದಕ್ಕುವಂತಹುದಲ್ಲ. ಕೆಲವರನ್ನು ಮಾತ್ರ ತನ್ನ ಮಡಿಲಿನಲ್ಲಿಟ್ಟು ಪೋಷಿಸುತ್ತದೆ. ಅಂತಹವರಲ್ಲಿ ಬ.ಗಿ.ಯಲ್ಲಟ್ಟಿಯವರು ಒಬ್ಬರು. ಬದುಕಿನ ವಿವಿಧ ಮುಖಗಳನ್ನು ಅನುಭಾವದ ನೆಲೆಯಲ್ಲಿ ಸ್ವೀಕರಿಸಿ ಆಧ್ಯಾತ್ಮಿಕ ಲೋಕದಲ್ಲಿ ಬದುಕನ್ನು ತೊಡಗಿಸಿಕೊಂಡವರು, ಬರೆಯುತ್ತಲೇ ಬಾಳಿದವರು. ಕಿತ್ತು ತಿನ್ನುವ ಬಡತನ, ಬಾಯಿ ತೆರೆದು ನಿಂತ ಕಾಲ, ಕಾಡುತ್ತಲೇ ಇರುವ ಅನಾರೋಗ್ಯ, ಒಪ್ಪುಗೆಡಿಸುತ್ತಿರುವ ಮುಪ್ಪು, ಇವೆಲ್ಲವೂ ಅವರ ಬರಹದ ಮೇಲಿನ ಆಸಕ್ತಿಯನ್ನು ಎಂದೂ ಕದಲಿಸಲಿಲ್ಲ. ಹೀಗಾಗಿ ಅವರ ಸಾಹಿತ್ಯದ ಕಾಲು ಭಾಗದಷ್ಟು ಅಪ್ರಕಟಿತ ಸಾಹಿತ್ಯವಿದೆ. ಅವುಗಳಲ್ಲಿ ರೂಪಕ, ವ್ಯಾಖ್ಯಾನ ಮುಂತಾದವುಗಳು ಸಿಗುತ್ತವೆ. ಆದರೆ ಲೇಖಕರೇ ತಮ್ಮ ಮಹಾಪ್ರಬಂಧದಲ್ಲಿ ಹೇಳುವಂತೆ ಪ್ರಕಟಿತ ಸಾಹಿತ್ಯದಷ್ಟು ಅಪ್ರಕಟಿತ ಸಾಹಿತ್ಯ ಮಹತ್ವದ್ದಲ್ಲವೆಂದು ಅವುಗಳಲ್ಲಿನ ಸಂಕೀರ್ಣತೆ, ವಿಶ್ಲೇಷಣೆ ಹಾಗೂ ಹರಿತವಾದ ಆಲೋಚನೆಗಳ ಬೆಳವಣಿಗೆ ಇಲ್ಲಿ ಕಂಡು ಬರುವುದಿಲ್ಲವೆಂದು ಚಿಲಮಿ ಅವರೇ ಮಹಾಪ್ರಬಂಧದ ಆರನೇ ಅಧ್ಯಾಯದಲ್ಲಿ ವಸ್ತುನಿಷ್ಠವಾಗಿ ವಿಶ್ಲೇಷಣೆ ಮಾಡಿರುವುದು ಕಂಡುಬರುತ್ತದೆ. ಬಾಳಿನ ಹಲವು ಮಜಲುಗಳನ್ನು ಸಂತೋಷದಿಂದ ಸ್ವೀಕರಿಸಿ ಅನುಭವಿಸಿದವರು ಯಲ್ಲಟ್ಟಿಯವರು ಎಂಬುದನ್ನು ಚಿಲಮಿ ಅವರು ಎಂಟನೆ ಅಧ್ಯಾಯದಲ್ಲಿ ತಿಳಿಯಪಡಿಸುತ್ತಾರೆ.

ಮಹಾಪ್ರಬಂಧದ ಕೊನೆಯಲ್ಲಿ ಅನುಬಂಧಗಳನ್ನು ಕೊಡಲಾಗಿದೆ. ಬ.ಗಿ.ಯಲ್ಲಟ್ಟಿಯವರ ಪ್ರಕಟಿತ ಮತ್ತು ಅಪ್ರಕಟಿತ ಕೃತಿಗಳು, ಪ್ರಕಟಿತ ಲೇಖನಗಳು, ಅಲ್ಲದೆ ಇತರ ಕೃತಿಗಳಿಗೆ ಯಲ್ಲಟ್ಟಿಯವರು ಬರೆದ ಮುನ್ನುಡಿಗಳನ್ನೂ ಸಹಿತ ಅನುಬಂಧ ಒಂದರಲ್ಲಿ ಹೇಳಲಾಗಿದೆ. ಬ.ಗಿ.ಯಲ್ಲಟ್ಟಿಯವರ ಜೀವನದ ಪ್ರಮುಖ ಘಟನೆಗಳನ್ನು ಕಾಲಾನು ಕ್ರಮವಾಗಿ ಅನುಬಂಧ ಎರಡರಲ್ಲಿ ತಿಳಿಸಿದ್ದಾರೆ. ಚಿಲಮಿ ಅವರು ಯಲ್ಲಟ್ಟಿಯವರೊಂದಿಗೆ ನಡೆಸಿದ ಸಂದರ್ಶನವನ್ನು ಎಳೆ ಎಳೆಯಾಗಿ ನೀಡಿದ್ದಾರೆ. ಒಟ್ಟಾರೆ ಈ ನಿಬಂಧದಲ್ಲಿ ಸಂಶೋಧಕ ಚಿಲಮಿ ಅವರು ಅಧ್ಯಯನಶೀಲತೆ ಸಹೃದಯ ಓದುಗರನ್ನು ತನ್ಮಯಗೊಳಿಸುತ್ತದೆ. ಆಧ್ಯಾತ್ಮಿಕ ಜೀವಿಯ ಸಾರ್ಥಕ ಬದುಕನ್ನು ಸಾರ್ಥಕ ರೀತಿಯಲ್ಲಿಯೇ ವಿವರಿಸಿ ಅವರ ಕ್ರಿಯಾತ್ಮಕ ಗುಣ, ಸೃಜಶೀಲ ಮತ್ತು ವಾಸ್ತವಿಕತೆ, ಪ್ರಾಮಾಣಿಕ ಬರವಣಿಗೆ ಸಹೃದಯರನ್ನು ಮನಸೆಳೆಯವಲ್ಲಿ ಯಶಸ್ವಿಯಾಗಿದೆ ಎಂದು ಹೇಳಬಹುದು.

ಆಧುನಿಕ ಕನ್ನಡನವೋದಯ ಘಟ್ಟದಲ್ಲಿ ಪತ್ರ ಲೇಖನ ಸಾಹಿತ್ಯವೂ ಒಂದು ಪ್ರಕಾರವಾಗಿದೆ. ಅದೊಂದು ಕಲಾತ್ಮಕ ನಿರೂಪಣೆ, ಪದ, ವ್ಯಾಖ್ಯೆ, ಚಿನ್ಹೆ ಎಲ್ಲವೂ ಮುಖ್ಯ ಮತ್ತು ಪರಿಣಾಮಕಾರಿ ರಸ, ಶೈಲಿ, ಗುಣ, ವರ್ಣನೆ ಮುಂತಾದ ಸಾಹಿತ್ಯಿಕ ವೈಶಿಷ್ಟ್ಯಗಳು

ಪ್ರಾಮುಖ್ಯವೆನಿಸುತ್ತವೆ. ಸಂಕ್ಷಿಪ್ತತೆ, ಸಂಪೂರ್ಣತೆ, ಸೌಜನ್ಯತೆ, ಸ್ಪಷ್ಟತೆ, ಪತ್ರ ಸಾಹಿತ್ಯದ ಪ್ರಮುಖ ಲಕ್ಷಣಗಳು, ಯಲ್ಲಟ್ಟಿಯವರು ತಮ್ಮ ಬದುಕಿನಲ್ಲಿ ಬರೆದ ಪತ್ರಗಳು ಹಲವು. ಆದರೆ ಸಾಹಿತ್ಯದಷ್ಟೇ ಪ್ರಾಮುಖ್ಯತೆಯನ್ನು ಈ ಪತ್ರಗಳಿಗೆ ನೀಡಿದವರಲ್ಲ. ಹೀಗಾಗಿ ಬೇರೆ ಕಡೆಯಿಂದ ಬಂದ ಪತ್ರಗಳನ್ನು ಜೋಪಾನವಾಗಿಟ್ಟಿಲ್ಲ. ಆದರೂ ಅವರ ಬದುಕಿಗೆ ಸಂಬಂಧಿಸಿದಂತೆ ಲಭ್ಯವಿರುವ ಒಟ್ಟು ಪತ್ರಗಳ ಸಂಖ್ಯೆ ನಲವತ್ತೂರು. ವಿಷಯದಲ್ಲಿ ವೈವಿಧ್ಯತೆ, ನಿರೂಪಣೆಯಲ್ಲಿ ಸರಳತೆ ಹಾಗೂ ಪರಿಪೂರ್ಣವಾದ ಭಾವ ಸಂಬಂಧಗಳು ಪತ್ರದ ಮೂಲಕ ಸೆರೆಹಿಡಿಯುತ್ತಿದ್ದವು ಎಂಬುದನ್ನು ಪತ್ರಗಳ ಮೂಲಕ ಚಿಲಮಿಯವರು ಏಳನೆಯ ಅಧ್ಯಾಯದಲ್ಲಿ ಪತ್ರಗಳ ಉದಾಹರಣೆಯೊಂದಿಗೆ ವಿವರಿಸಿದ್ದಾರೆ.

ಎಂಟನೆಯ ಅಧ್ಯಾಯದಲ್ಲಿ 'ಸಾಹಿತ್ಯಿಕ ಸಾಧನಗಳ ಸಮೀಕ್ಷೆ' ಎಂಬ ಶಿರ್ಷಿಕೆ ಅಡಿಯಲ್ಲಿ ಯಲ್ಲಟ್ಟಿಯವರ ಸಮಸ್ತ ಬದುಕಿನ ಕಿರುನೋಟವನ್ನು ಸೆರೆಹಿಡಿದಿದ್ದಾರೆ. ನವೋದಯ ಕಾಲದ ಕವಿಯಾಗಿ ಕಾವ್ಯ ಹೊರಹೊಮ್ಮಿ ಯಾವುದೇ ಸಾಹಿತ್ಯದ ನೆಲೆ ಪಡೆಯದೇ ಸರ್ವಸಮ್ಮತವನ್ನು ಅನುಭವಿಸಿ ಅನುಭಾವ, ಅಧ್ಯಾತ್ಮಿಕ ಲಹರಿಯಲ್ಲಿ ಚಿಂತನೆ ನಡೆಸಿ, ಕೃತಿಗೈಯುವಲ್ಲಿ ಯಲ್ಲಟ್ಟಿಯವರು ನಿಪುಣರು. ಗದ್ಯ, ಪದ್ಯ, ವಚನ, ವಚನ ವ್ಯಾಖ್ಯಾನ, ರೂಪಕ ಮುಂತಾದ ಕ್ಷೇತ್ರಗಳಲ್ಲಿ ಎಲೆ-ಮರೆಯ ಕಾಯಿಯಂತೆ ಸಾಹಿತ್ಯ ಸೇವೆಗೈದು ಬಾಳಿದವರು. ಶಾಸ್ತ್ರೀಯ ನಿರೂಪಣೆ, ಬರವಣಿಗೆಯ ಆತ್ಮೀಯ ಶೈಲಿ, ಪರಿಶ್ರಮ ಅಚ್ಚುಕಟ್ಟಾದ ಬರವಣಿಗೆ ಮತ್ತು ಕೃತಿಗಳ ಸರಿಯಾದ ಮೌಲ್ಯಮಾಪನ ಮಾಡಿ ನವೋದಯ ಕಾಲದ ಎಲೆಮರೆಯ ಕವಿ ಯಲ್ಲಟ್ಟಿಯವರಿಗೆ ಸಮಂಜಸವಾದ ಸ್ಥಾನ ದೊರೆಕಿಸಿಕೊಟ್ಟ ಶ್ರೇಯಸ್ಸು ಚಿಲಮಿ ಅವರಿಗೆ ಸಲ್ಲಬೇಕಾಗುತ್ತದೆ. ಇದೊಂದು ಮೌಲಿಕವಾದ ಮಹಾಪ್ರಬಂಧವಾಗಿದ್ದು. ನವೋದಯ ಘಟ್ಟದ ಕಾವ್ಯ ಪರಂಪರೆಯನ್ನು ಅಧ್ಯಯನ ಮಾಡುವವರಿಗೆ ಇದೊಂದು ಉಪಯುಕ್ತ ಆಕರ ಗ್ರಂಥ ಆಗಬಹುದಾಗಿದೆ.

## ಅಡಿ ಟಿಪ್ಪಣಿಗಳು

೧. ಡಾ.ಆರ್.ಬಿ.ಚಿಲಮಿ, ಬ.ಗಿ.ಯಲ್ಲಟ್ಟಿ : ಸಮಗ್ರ ಸಾಹಿತ್ಯ, ಪುಟ ಸಂಖ್ಯೆ-೪

೨. ಅದೇ ಪುಟ-೧೬

೩. ಅದೇ ಪುಟ-೧೭

೪. ಅದೇ ಪುಟ-೧೮

೫. ಅದೇ ಪುಟ-೩೪

೬. ಅದೇ ಪುಟ-೪೯

೭. ಅದೇ ಪುಟ-೧೪೫

# ಅಧ್ಯಾಯ–ಐದು

## ಚಿಲಮಿ ಅವರು ರಚಿಸಿದ ಜೀವನ ಚರಿತ್ರೆಗಳು: ಒಂದು ಸಮೀಕ್ಷೆ

# ಅಧ್ಯಾಯ–ಐದು

# ಚಿಲಮಿ ಅವರು ರಚಿಸಿದ ಜೀವನ ಚರಿತ್ರೆಗಳು: ಒಂದು ಸಮೀಕ್ಷೆ

ಪಾಶ್ಚಿಮಾತ್ಯ ಸಾಹಿತ್ಯ ಪ್ರಭಾವದಿಂದ ಬಂದ ಗದ್ಯ ಸಾಹಿತ್ಯ ಪ್ರಕಾರಗಳಲ್ಲಿ ಜೀವನ ಚರಿತ್ರೆಯು ಒಂದು. ಒಬ್ಬ ವ್ಯಕ್ತಿಯ ಜೀವನವನ್ನು ಯಥಾವತ್ತಾಗಿ ಚಿತ್ರಿಸಿರುವ ಕೃತಿಯೇ ಜೀವನ ಚರಿತ್ರೆ ಎನಿಸಿಕೊಳ್ಳುತ್ತದೆ. ಜೀವನ ಚರಿತ್ರೆಯನ್ನು ಆಧುನಿಕ ದೃಷ್ಟಿಯಿಂದ ಅವಲೋಕಿಸಿದರೆ ಮೊಟ್ಟ ಮೊದಲನೆಯದಾಗಿ ಚರಿತ್ರೆಯ ನಾಯಕ ಬದುಕಿರಬೇಕು. ಆತನ ಬದುಕಿನ ಸಂಗತಿಗಳು ಸತ್ಯವಾಗಿರಬೇಕು ಎಂದಾಗುತ್ತದೆ. "ಪ್ರಪಂಚದ ಯಾವ ಭಾಷೆಯಲ್ಲಿಯೂ ಮೊಮ್ಮೊದಲಿನ ಜೀವನ ಚರಿತ್ರೆಗಳು ವಿಚಾರ ದೃಷ್ಟಿ ಐತಿಹಾಸಿಕ ಪ್ರಜ್ಞೆಯಿಂದ ಹುಟ್ಟಿದುವಲ್ಲ. ಆರಾಧನಾ ದೃಷ್ಟಿಯಿಂದ ಬೆಳೆದವು. ಈ ಬಗೆಯ ಜೀವನ ಚರಿತ್ರೆಯ ಅಂಕುರಾವಸ್ಥೆಯನ್ನು ವಿಶ್ವದ ಜನಪದ ಗೇಯ ಕಾವ್ಯಗಳಲ್ಲಿಯೂ, ಪೌರಾಣಿಕ ಕಥೆಗಳಲ್ಲಿಯೂ ಕಾಣಬಹುದು. ಹೋಮರ್ ಕವಿಯ ಇಲಿಯಡ್ ಮತ್ತು ಒಡಿಸ್ಸಿ, ಭಾರತದ ರಾಮಾಯಣ–ಮಹಾಭಾರತಗಳು ಮತ್ತು ಈಚಿನ ಪುರಾಣಗಳು, ಇವೆಲ್ಲ ದೇವತೆಗಳ, ಮಹಾವೀರರ ಚರಿತ್ರೆಗಳ ಸಂಕಲನಗಳು. ಈಚಿನ ಕಾಲಗಳಲ್ಲಿ ಗ್ರಂಥಸ್ಥವಾಗುವುದಕ್ಕೆ ಮೊದಲು ಮುಖ್ಯಸ್ಥರಾಗಿ, ಕರ್ಣಾಕರ್ಣಿಕೆಯಾಗಿ ಸಾಗಿಬಂದವು. ಅಲೌಕಿಕ ಪುರುಷರಾದ ದೇವತೆಗಳ, ವೀರರ ಆರಾಧನೆಯ ಮನೋವೃತ್ತಿಯೆ (ಹೀರೋ ವರ್ಷಿಪ್) ಜೀವನ ಚರಿತ್ರೆಯ ಹುಟ್ಟಿಗೆ ಮೂಲ ಕಾರಣ."[೧] ಅನ್ಯರ ವಿಚಾರ ತಿಳಿದುಕೊಳ್ಳುವ, ಅಂಥವರ ಆದರ್ಶಗಳನ್ನು ಅನುಸರಿಸುವ, ಪ್ರವೃತ್ತಿ ಮಾನವನಲ್ಲಿ ಸಹಜವಾಗಿ ರೂಪಗೊಂಡಾಗ ಜೀವನ ಚರಿತ್ರೆಗಳು ಹುಟ್ಟಿಕೊಳ್ಳಲು ಸಾಧ್ಯವಾಗುತ್ತದೆ.

ಕನ್ನಡದಲ್ಲಿ ಬಂದ ಆರಂಭದ, ಜೀವನ ಚರಿತ್ರೆಗಳು ಮಹಾಪುರುಷರ ಜೀವನ, ಸಾಧನೆ, ದೇಶಾಭಿಮಾನ, ಉನ್ನತ ಧ್ಯೇಯಗಳನ್ನು ತಿಳಿಸುವ ಉದ್ದೇಶದಿಂದ ರಚಿಸಲ್ಪಟ್ಟವು. ಕನ್ನಡದ ಹಲವಾರು ಸಾಹಿತಿಗಳು ಜೀವನ ಚರಿತ್ರೆಗಳನ್ನು ರಚಿಸಿದ್ದಾರೆ. ಎಂ.ಎಸ್.ಪುಟ್ಟಣ್ಣ, ಆಲೂರು ವೆಂಕಟರಾಯರು,

ಮಾಸ್ತಿ, ಡಿ.ವಿ.ಜಿ, ಎ.ಆರ್.ಕೃಷ್ಣಶಾಸ್ತ್ರಿ, ಮಿರ್ಜಿ ಅಣ್ಣಾರಾಯ, ಮುಂತಾದವರು ಈ 'ಜೀವನ ಚರಿತ್ರೆ' ಪ್ರಕಾರಕ್ಕೆ ಉತ್ತಮ ಕೊಡುಗೆ ನೀಡಿರುವರು.

ಧಾರ್ಮಿಕ ನಾಯಕರನ್ನು ಕುರಿತು ಬರೆದ ಹಲವರ ಜೀವನ ಚರಿತ್ರೆಗಳನ್ನು ಕನ್ನಡದಲ್ಲಿ ಕಾಣುತ್ತೇವೆ. ಉದಾಹರಣೆಗೆ ಗೌತಮ ಬುದ್ಧ (ಜಿ.ಪಿ.ರಾಜರತ್ನಂ), ಮಹಾವೀರನ ಜೀವನ ಚರಿತ್ರೆ (ಮಿರ್ಜಿ ಅಣ್ಣಾರಾಯ), ಮುಂತಾದವು. ಶರಣರ ಚರಿತಾಮೃತ (ಸಿದ್ಧಯ್ಯ ಪುರಾಣಿಕ), ಶ್ರೀ ಶರಣ ಬಸವ ದರ್ಶನ (ಯಲ್ಲಟ್ಟಿ) ಇವು ಧಾರ್ಮಿಕ ನಾಯಕರನ್ನು ಕುರಿತು ಬರೆದ ಜೀವನ ಚರಿತ್ರೆಗಳು.

ನಮ್ಮ " ಗದ್ಯ ಸಾಹಿತ್ಯದ ವಿವಿಧ ರೂಪಗಳಲ್ಲಿ ಜೀವನ ಚರಿತ್ರೆಗೆ ಮಹತ್ವದ ಸ್ಥಾನವಿದೆ. ವ್ಯಕ್ತಿಯೊಬ್ಬನ ಜೀವನದ ಸಾಧನೆಗಳು ಮುಂದಿನ ಪೀಳಿಗೆಗೆ ಆದರ್ಶವನ್ನು ಹಾಕಿಕೊಡುತ್ತವೆ. ಅದರಲ್ಲಿ ಕೆಲವು ಆರಾಧನೆಯ ಭಾವ ತುಂಬಿಕೊಂಡು ವ್ಯಕ್ತಿತ್ವವನ್ನು ಕಡೆದು ನಿಲ್ಲಿಸುವ ರೀತಿಯು ಪ್ರಕಟವಾಗುತ್ತದೆ."[೨] ಜೀವನ ಚರಿತ್ರೆ ಎಂದರೆ ಹೊಗಳಿಕೆಯು ಅಲ್ಲ, ತೆಗಳಿಕೆಯು ಅಲ್ಲ ತಾನು ಆರಿಸಿಕೊಂಡ ವ್ಯಕ್ತಿಯ ಪ್ರಾಮಾಣಿಕ ಚಿತ್ರ ಆಗಿರಬೇಕು. ಸದ್ಗುಣಗಳನ್ನು ಹೊಗಳುವುದಾಗಲಿ, ದುರ್ಗುಣಗಳನ್ನು ತೆಗಳುವುದಾಗಲಿ ಮಾಡದೆ ಭಾವಾವೇಶವಿಲ್ಲದೆ. ಎರಡನ್ನೂ ಚಿತ್ರಿಸುವುದು ಅದರ ಉದ್ದೇಶ. ಓದುಪವರ ಮನಸ್ಸಿನಲ್ಲಿ ಕೊನೆಯವರೆಗೂ ಉಳಿಯುವ ಒಂದು ಪ್ರಭಾವ ಅದರಿಂದ ಆಗಬೇಕು. ಹೀಗೆ ಸಾಮಾನ್ಯ ವ್ಯಕ್ತಿಯಲ್ಲಿರುವ ಆದರ್ಶಗಳನ್ನು ಕನ್ನಡ ನಾಡು, ನುಡಿಗೆ, ಅವರು ಸಲ್ಲಿಸಿದ ಕೊಡುಗೆಯನ್ನು ಸಾಧು-ಸಂತರ, ವಾಣಿಗಳನ್ನು ತಮ್ಮ ಕೃತಿಗಳಲ್ಲಿ ನಮ್ಮ ಹಲವಾರು ಲೇಖಕರು ಚಿತ್ರಿಸುತ್ತಾ ಬಂದಿದ್ದಾರೆ. ಅಪರೂಪದ ವ್ಯಕ್ತಿತ್ವಗಳನ್ನು ಚಿತ್ರಿಸುವ ಮೂಲಕ ಅವರು ಸಹೃದಯ ಓದುಗರ ಮೇಲೆ ಮರೆಯಲಾಗದ ಪ್ರಭಾವ ಬೀರಿದ್ದಾರೆ. ಈ ಸಾಲಿನಲ್ಲಿ ಲೇಖಕ ಆರ್.ಬಿ.ಚಿಲಮಿ ಅವರ 'ಧಾರ್ಮಿಕ ನಾಯಕರ ಜೀವನ ಚರಿತ್ರೆಗಳು' ನಿಲ್ಲುವಂಥವುಗಳಾಗಿವೆ.

ಚಿಲಮಿಯವರು ಆಯ್ಕೆ ಮಾಡಿಕೊಂಡ ಚರಿತ್ರಾರ್ಹ ಮಹಾ ಪುರುಷರೆಂದರೆ

೧. ಕುಳ್ಳೂರು ಕಲ್ಮಠದ ಶಿವಯೋಗಿಗಳು.

೨. ಕುಳ್ಳೂರು ಕಲ್ಮಠದ ರೇವಯ್ಯ ಮಹಾಸ್ವಾಮಿಗಳು.

೩. ಕುಳ್ಳೂರು ಕಲ್ಮಠದ ಸಿದ್ಧರಾಮೇಶ್ವರ ಶಿವಯೋಗಿಗಳು ಈ ಮೂವರು ಮಹಾತ್ಮರು ಲೋಕ ಕಲ್ಯಾಣಗೈಯಲು ಬಂದ ಪುಣ್ಯಪುರಷರು. ಇವರು ಎಲ್ಲವನ್ನೂ ತೊರೆದು ತ್ಯಾಗಿಗಳಾಗಿ ಲೋಕಕ್ಕೆ ಬೆಳಕು ನೀಡಿದವರು. ಜನತೆಗೆ ಬಂದೊದಗಿದ ಸಂಕಷ್ಟಗಳನ್ನು, ನೋವು, ದುಃಖ-ದುಮ್ಮಾನಗಳನ್ನು ದೂರಗೊಳಿಸಿ-ಸುಖವನ್ನು ಹಂಚಲು ಧರೆಯಲ್ಲಿ ನಿಂತವರು. ಇವರ ನಡೆ-ನುಡಿ, ಆಚಾರ-ವಿಚಾರಗಳು ಮಹಾತ್ಮರಿಗೂ ಮಾಗದರ್ಶನವನ್ನು ನೀಡಿದವು. ಇಂಥ ಶಿವಯೋಗಿತ್ರಯರ ಚರಿತ್ರೆಯನ್ನು ಕಟ್ಟುವಲ್ಲಿ ಚಿಲಮಿಯವರ ಶೈಲಿ ಹರಿಹರ ಕವಿಯ ಗದ್ಯದ ಶೈಲಿಯನ್ನು ನೆನಪಿಸುತ್ತದೆ. ಲೇಖಕರು ಕಟ್ಟಿಕೊಟ್ಟ-(ಮೂರು ಮಹಾತ್ಮರ ಜೀವನ ಚರಿತ್ರೆಗಳನ್ನು ಶ್ರೀ ಮಠ ಕುಳ್ಳೂರು-ಹೊಸಕೋಟೆ ಮಠದಿಂದ ೨೦೦೫ರಲ್ಲಿ ಪ್ರಕಟವಾಗಿವೆ. ಚಿಲಮಿ ಅವರ ಈ ಮೂರು ಚರಿತ್ರೆಯ ಕೃತಿಗಳನ್ನು ಕುರಿತು ವಿಶ್ಲೇಷಣೆ ಮಾಡುವುದು ಈ ಅಧ್ಯಾಯದ ಮುಖ್ಯ ಉದ್ದೇಶವಾಗಿದೆ.

## ೧. ಕುಳ್ಳೂರು ಕಲ್ಮಠದ ಸದ್ಗುರು ಶಿವಯೋಗೀಶ್ವರರ ಚರಿತ್ರೆ

ಪ್ರಪ್ರಥಮ ಗುರು ಸಾರ್ವಭೌಮ ಚಕ್ರವರ್ತಿ ಹಾಗೂ ಪೀಠಾಧಿಪತಿಯೆನಿಸಿದ ಸದ್ಗುರು ಶ್ರೀ ಶಿವಯೋಗೀಶ್ವರರ ಚರಿತ್ರೆ, ಚಿಲಮಿ ಅವರು ಬರೆದ ಮೊದಲ ಜೀವನ ಚರಿತ್ರೆ ಕೃತಿ ಶ್ರೀ ಶಿವಯೋಗೀಶ್ವರರ ಜೀವನ ಚರಿತ್ರೆಯನ್ನು ವಿವರವಾಗಿ ಹಿಡಿದಿಡಲಾಗಿದೆ. ಈ ಕೃತಿಯಲ್ಲಿ ಒಟ್ಟು ೧೧ ಅಧ್ಯಾಯಗಳಿವೆ. ಅವು ಹೀಗಿವೆ.

೧. ಮುಕ್ತಿಯ ಸೊಬಗು ಸುಕ್ಷೇತ್ರ ಕುಳ್ಳೂರು ಕಲ್ಮಠ

೨. ಶ್ರೀಮಠದಲ್ಲಿ ಜರುಗುತ್ತಲಿರುವ ಮಂಗಲಮಯ ಮಹೋತ್ಸವಗಳು.

೩. ದಕ್ಷಿಣ ಕಾಶಿಯೆಂದೇ ಖ್ಯಾತಿ ಹೊಂದಿದ ಶ್ರೀ ಕ್ಷೇತ್ರ ಸೊಗಲ

೪. ಸದ್ಗುರು ಶಿವಯೋಗೀಶ್ವರರ ಜನನ, ಬಾಲ್ಯ ಮತ್ತು ಶಿಕ್ಷಣ

೫. ಶಿವಪಥವನರಿವೊಡೆ ಗುರು ಪಥವೇ ಮೊದಲು (ಕಾಶಿಯ ಪಂಡಿತ ಯೋಗಿವರ್ಯರಿಂದ ಬ್ರಹ್ಮಜ್ಞಾನದ ಉಣಿಸು)

೬ ಸೂಜಿಗಲ್ಲಲಿ ತಪವಗೈದಿಹ ಶಿವಸ್ವರೂಪರೆನಿಸಿದ ತೇಜಮೂರುತಿ ಶಿವಯೋಗಿಯ ತಂದರು ಕುಳ್ಳೂರಿಗೆ

೭ ಕುಳ್ಳೂರು ಪುರದ ಪುಣ್ಯ ಶಿವಯೋಗೀಶ್ವರರಿಂದ ಪ್ರಾಪ್ತವಾದುದು

೮. ಶ್ರೀ ಸದ್ಗುರು ಶಿವಯೋಗೀಶ್ವರರಿಂದ ಇಂಚಲಪುರವು ಮುಕ್ತಿನ ಗೊಂಚಲವಾದುದು

೯. ಸದ್ಗುರು ಶಿವಯೋಗೀಶ್ವರರ ಲೀಲೆಗಳು

೧೦. ಮಿಂಚಿನಂತೆ ಬೆಳಗಿ ಮಾಯವಾದ ಶ್ರೀ ಶಿವಯೋಗೀಶ್ವರರ ಜೇಷ್ಠ ಪುತ್ರ ಸೋಮಯ್ಯ

೧೧. ಮೋಕ್ಷ ಬಂಧನದಲ್ಲಿ ಶ್ರೀ ಶಿವಯೋಗೀಶ್ವರರು.

ಈ ಕೃತಿಯ ಮೊದಲ ಅಧ್ಯಾಯದಲ್ಲಿ ಲೇಖಕ ಚಿಲಮಿ ಶ್ರೀಮಠದ ಪ್ರಕೃತಿಯ ಮಡಿಲು ಕಲ್ಲಿನಿಂದ ನಿರ್ಮಾಣಗೊಂಡ ಕಲ್ಮಠ, ಸಾಲುಸಾಲಾಗಿ ನಿಂತ ತರುಲತೆಗಳು, ಫಲ–ಪುಷ್ಪ ಕೊಡುವ ವಿವಿಧ ಪ್ರಕಾರದ ಮರಬಳ್ಳಿಗಳ ವರ್ಣನೆಯನ್ನು ಸೊಗಸಾಗಿ ಚಿತ್ರಿಸಿದ್ದಾರೆ. ಮಠವನ್ನು ಕಂಡರೆ ಸಾಕು ಕಲ್ಲುಗಳ ಹಾಸುಗೆಯ ಮೇಲೆಯೇ ತೊಲೆ–ಕಂಭ, ಮೇಲು ಮಾಳಿಗೆ ಎಲ್ಲವೂ ಕಲ್ಲು–ಕಮಾನುಗಳು ಕಲ್ಲುಗಳಿಂದಲೇ ನಿರ್ಮಾಣ ಮಾಡಿದ ಬಗೆಯ ವರ್ಣನೆಯನ್ನು ಗಮನಿಸಿದರೆ ಬೇಲೂರು–ಹಳೆಬೀಡು, ಹಂಪಿಯ ವಿರೂಪಾಕ್ಷ ದೇವಾಲಯಗಳನ್ನು ನೆನಪಿಗೆ ತರುತ್ತದೆ. ಸ್ವತಃ ಲೇಖಕರು ಈ ಚರಿತ್ರಾರ್ಹ ಮಹಾ ಶಿವಯೋಗಿಗಳ ಚರಿತ್ರೆ ಕಟ್ಟುವಲ್ಲಿ ಅವರು ಅಲೆದಾಡಿದ ಪ್ರಮುಖ ಊರುಗಳಿಗೆ, ಮಠ–ಮಂದಿರಗಳಿಗೆ ಅಂಥ ಪೂಜ್ಯರನ್ನು ಗುರು–ಹಿರಿಯರನ್ನು ಕಂಡು ಸಂಪರ್ಕಿಸಿದ್ದು ಕಂಡು ಬರುತ್ತದೆ.

ಪ್ರಮುಖ ಊರುಗಳಾದ ಕುಳ್ಳೂರು, ಬೂದನೂರು, ಸಾಲಹಳ್ಳಿ, ಇಂಚಲ, ನೇಸರಗಿ-ಮಲ್ಲಾಪುರ, ಚುಳಕಿ-ಯಡಹಳ್ಳಿ, ಬೂದಿಹಾಳ (ಬಾಗಲಕೋಟ ಜಿಲ್ಲೆಯ ಗ್ರಾಮಗಳು) ಇಂಗಳಗಿ-ಯಡಹಳ್ಳಿ, ಹಾರೂಗೇರಿ, ಹೊಸಕೋಟೆ ಈ ಮುಂತಾದ ಗ್ರಾಮಗಳಲ್ಲಿರುವ ಹಿರಿಯರನ್ನು, ಮಠಾಧೀಶರನ್ನು ಸಂಪರ್ಕಿಸಿ ವಿಷಯ ಸಂಗ್ರಹ ಮಾಡಿಕೊಂಡು ಚರಿತ್ರೆ ಬರೆದದ್ದು ಸಣ್ಣ ಮಾತೇನಲ್ಲ.

ಕುಳ್ಳೂರು ಕಲ್ಮಠದ ಮೊಟ್ಟ ಮೊದಲನೆಯ ಪೀಠಾಧಿಪತಿಯಾದ ಶ್ರೀ ಶಿವಯೋಗೀಶ್ವರರು ಸೊಗಲದ ಸೋಮದೇವನ ಅರ್ಚಕರಾದ ಸಿದ್ಧಯ್ಯ ಸ್ವಾಮಿಯ ಮಗನು ತಾಯಿಯ ಹೆಸರು ಪಾರ್ವತಿದೇವಿ. ಸಿದ್ಧಯ್ಯ-ಪಾರ್ವತಿದೇವಿಯರ ಪುಣ್ಯಗರ್ಭದಿಂದ ಜನಿಸಿದ ಶಿವಯೋಗಿಯು ಬಹು ದೀರ್ಘ ವರ್ಷಗಳ ತರುವಾಯ ಜನಿಸಿದ ಕಂದನಿವನು. ಅಕ್ಕರೆ-ಮಮತೆಯಿಂದ ಈ ಮಗುವನ್ನು ಜೋಪಾನ ಮಾಡುತ್ತಾರೆ. ಸೊಗಲ ಗುಡ್ಡದಲ್ಲಿರುವ ಸೋಮೇಶ್ವರ ದೇವಾಲಯದಲ್ಲಿ ಪೂಜೆ-ಪುನಸ್ಕಾರ ಮಾಡಿ ಸೊಗಲ ಗ್ರಾಮಕ್ಕೆ ಸಿದ್ಧಯ್ಯನು ಬರುವುದು ಮನೆಯ ಕೆಲಸಗಳಲ್ಲಿ ಭಾಗಿಯಾಗುವುದು ಊರಿನ ಹಿರಿತನದ ಕೆಲಸಗಳನ್ನು ಬಲು ಚಾಣಾಕ್ಷತೆಯಿಂದ ಮಾಡಿ ತೀರ್ಪು ನೀಡುವುದು, ಇದು ಅವನ ದಿನಚರಿಯಾಗಿತ್ತು. ಪಾರ್ವತಿದೇವಿಗೆ ಬೇಗನೇ ಮಕ್ಕಳಾಗದ ಸಂದರ್ಭ ನೋವು-ಬೇಸರ ತಂದಿತ್ತು. ಅದರಿಂದ ಸಿದ್ಧಯ್ಯನ ಮನಸ್ಸು ಜರ್ಜರಿತವಾಗಿತ್ತು. ಎಂದು ಲೇಖಕರು ಹೇಳಿರುವ ಮಾತುಗಳು ಕರುಳು ಕಿತ್ತು ಬರುವಂತಿವೆ. 'ಶಿವಯ್ಯ'ನ ಜನನದಿಂದಾಗಿ ತಂದೆ-ತಾಯಿಗಳು ಬೇಸರಿಕೆಯನ್ನು ಮರೆತು, ಆತನ ಬಾಲ ಲೀಲೆಯಲ್ಲಿ ತಲ್ಲೀನರಾದ ಬಗೆಯನ್ನು ಹೀಗೆ ಹೇಳುತ್ತಾರೆ.

"ಶಿವಯ್ಯನು ಚಿಕ್ಕವನಿರುವಾಗಲೇ ಸೊಗಲದ ಗುಡ್ಡದಲ್ಲಿರುವ ಹೆಬ್ಬಾವುಗಳನ್ನು ತನ್ನ ಕೊರಳಿಗೆ ಹಾಕಿಕೊಳ್ಳುತ್ತಿದ್ದನು ಮತ್ತು ಅಲ್ಲಿ ದನ ಕಾಯುತ್ತಲಿರುವ ಹುಡುಗರಿಗೂ ಹಾಕುತ್ತಿದ್ದನು. ಅಲ್ಲದೆ ಸಾಕಷ್ಟು ತರಹದ ಹಾವುಗಳನ್ನು ಹಿಡಿಯುತ್ತಿದ್ದನು. ಈತನು ಸೋಮದೇವನ ಗುಡಿಯಲ್ಲೊಮ್ಮೆ, ಬೆಟ್ಟದೇಣಿಯ ಮೇಲೊಮ್ಮೆ ಕಾಣುವುದು ಮತ್ತೆ ಅದೃಶ್ಯನಾಗುವುದು, ಹೀಗೆ ಅನೇಕ ಪವಾಡಗಳನ್ನು"[೩] ಬಣ್ಣಿಸಿದ್ದಾರೆ.

ಸೊಗಲ ಸೋಮನಾಥನ ಗುಡಿಯ ಗಾಂವಠೀ ಶಾಲೆಯ ಶಿಕ್ಷಣ ಪಡೆಯುತ್ತಾನೆ. ಈತನಿಗೆ ಜಂಗಮ ಗುರುವೊಬ್ಬರಿದ್ದರು. ಹೇಳುವ ಪೂರ್ವದಲ್ಲಿಯೇ ಸಂಸ್ಕೃತ ಶ್ಲೋಕ, ಲೆಕ್ಕ, ವರ್ಣಮಾಲೆಗಳು, ಪದಗಳು ಮುಂತಾದವನ್ನು ಒಪ್ಪಿಸುತ್ತಿದ್ದುದನ್ನು ಕಂಡು, ಗುರುಗಳು ಈತ ಪ್ರಕಾಂಡ ಪಂಡಿತನು, ಎಂದು ಸಂತಸಪಟ್ಟರೆ, ಈತನ ಪಾಂಡಿತ್ಯದ ಪ್ರತಿಭೆಯನ್ನು

ಕಂಡು ತಂದೆ-ತಾಯಿಗಳು ಓಗ್ಗಿದರು. ಶಿವಯ್ಯನ ತಂದೆ ೧೨ ಜ್ಯೋತಿರ್ಲಿಂಗಗಳ ದರ್ಶನ ಪಡೆಯಲೆಂದು ಯಾತ್ರೆ ಕೈಗೊಂಡಾಗ ಸೊಗಲದೇವ ಪೂಜೆಯಲ್ಲಿ ಬಾಲಕ ಶಿವಯೋಗಿ ಮಗ್ನನಾಗಿರುವುದು, ಕಾಶಿಯಿಂದ ಬಂದ ಪಂಡಿತಯೋಗಿಯಿಂದ ಬ್ರಹ್ಮಜ್ಞಾನವನ್ನು ಪಡೆಯುವುದು. ಇವೆಲ್ಲವೂ ಸನ್ಯಾಸಿಯಾಗುವ ಲಕ್ಷಣಗಳು. ಪಂಡಿತಯೋಗಿ ಮತ್ತು ಶಿವಯ್ಯ ಇಬ್ಬರೂ ಗುರು-ಶಿಷ್ಯರಾಗಿದ್ದೂ ಸೋಜಿಗವೆನಿಸುತ್ತದೆ. ಸಂಸ್ಕೃತದ ವೇದ ಪುರಾಣದ ಗ್ರಂಥಗಳನ್ನು ಕರತಲಾಮಲಕ ಮಾಡಿಕೊಂಡ ಶಿವಯ್ಯನು ತಾನು ತನ್ನ ಗುರುವಿನಂತಾಗಬೇಕೆಂಬ ಹಂಬಲವುಳ್ಳವನಾಗುತ್ತಾನೆ. ಮನೆಯ ಕಡೆಗೆ ಗಮನ ಹರಿಸದೇ ಇರುತ್ತಾನೆ. ಇತ್ತ ತಂದೆ-ತಾಯಿಗಳು ಮಗನಿಗೆ ಮದುವೆ ಮಾಡಿ ನಿಶ್ಚಿಂತರಾಗಿರಬೇಕೆಂದು ಬಯಸಿ ಗುರು ಪಂಡಿತಯೋಗಿಯ ಹತ್ತಿರ ಬಂದು ವಿಚಾರಿಸಲಾಗಿ-ಶಿವಯ್ಯನ ಮನ ಪರಿವರ್ತಿಸಲು ಎಲ್ಲರೂ ಪ್ರಯತ್ನಿಸಿ ಕೊನೆಗೆ ಸಫಲರಾದರು. ಒತ್ತಾಯಕ್ಕೆ ಮಣಿದ ತರುಣ ಶಿವಯ್ಯನು ತಾಯಿ ಪಾರ್ವತಿಯ ಅಣ್ಣನ ಮಗಳು ಮಿಡೆವ್ವಳನ್ನು ವಿವಾಹವಾಗುತ್ತಾನೆ.

ಕೆಲವು ವರುಷಗಳು ದಾಂಪತ್ಯ ಜೀವನದಲ್ಲಿ ಕಳೆಯುತ್ತವೆ. ಆದರೂ ತಂದೆ-ತಾಯಿಯರ ಹಾದಿಯಲ್ಲಿ ಸೋಮನಾಥ ದೇವಾಲಯದಲ್ಲ ಪೂಜಾ-ಕಾಯಕದಲ್ಲಿ ಮಗ್ನನಾದ ಶಿವಯೋಗಿಗೆ ಸೋಮಲಿಂಗದೇವನ ಕೃಪಾಶಿರ್ವಾದದಿಂದ ಮೊದಲಿಗೆ ಗಂಡು ಮಗುವಿನ ಜನನವಾಗುತ್ತದೆ. ಆತನಿಗೆ ಈ ದೇವನ ಹೆಸರಾದ ಸೊಮೇಶ್ವರ (ಸೋಮಯ್ಯ)ಎಂದು ಹೆಸರಿಟ್ಟರು. ಅನಂತರದ ಕೆಲವು ವರ್ಷಗಳ ತರುವಾಯ ಹೆಣ್ಣು ಮಗುವೊಂದನ್ನು ತಾಯಿ ಮಿಡೆವ್ವಳು ಹಡೆದಳು. ಈ ಇಬ್ಬರೂ ಮಕ್ಕಳ ಲಾಲನೆ-ಪಾಲನೆಯಲ್ಲಿ ತಾಯಿಯು ಮಗ್ನಳಾದರೂ ಪತಿಯ ಬಗೆಗೆ ಅನುಮಾನ-ಸಂಶಯಗಳು ಕಾಡುತ್ತಲಿದ್ದವು. ಏಕೆಂದರೆ ಮಾಯಾ-ಮೋಹವೆಂಬುದು ಅಲ್ಪ ಸುಖದ ಮಡುವು ಎಂದೇ ಭಾವಿಸಿದ ಶಿವಯೋಗಿಯು ವೈರಾಗ್ಯ ತಾಳುತ್ತಾನೆಂಬುದು ಖಚಿತವೆನಿಸಿತ್ತು. ಹೀಗಾಗಿ ರಾತ್ರಿ-ಹಗಲೂ ಮಿಡೆವ್ವಳು ಚಿಂತಿತಳಾಗಿದ್ದಳು. ಈತನ ತಂದೆ-ತಾಯಿಗಳಿಗೂ ಬಿಡಿಸಲಾರದ ಕಗ್ಗಂಟಾಗಿಬಿಟ್ಟಿತು. ಮನಃ ಪರಿವರ್ತನೆಗೆ ಪ್ರಯತ್ನಿಸಿ ಸೋತರು. ಈ ಸಂಸಾರ ಸಾಗರವು ಅಲ್ಪಸುಖ ಕೊಡಬಲ್ಲದು ಆದರೆ ಶಾಶ್ವತ ಸುಖದ ನಿಧಿ ಇರುವುದು ಪರಮಾತ್ಮನನ್ನು ಕಾಣುವಲ್ಲಿ ಎಂದು ಅರಿತನು. ಸತ್ಕರ್ಮಗಳನ್ನು ಮಾಡಿ ಸನ್ಮಾರ್ಗದ ಗತಿಯನ್ನು ಗಮನಿಸಿದವರು ವಿರಳ, ಇಲ್ಲವೆ ಕೆಲವೇ ಕೆಲವರು ಮಾತ್ರ ಎಂದು ತಿಳಿದುಕೊಂಡ ಶಿವಯೋಗಿಯು ದ್ವಂದ್ವಗಳ ಜಡ ಜಗತ್ತು ತೊರೆದು ಪಂಡಿತಯೋಗಿಯ ಮಾರ್ಗದರ್ಶನದಂತೆ ಪರಮಾತ್ಮನನ್ನು ಕಾಣಬೇಕೆಂಬ ಲವಲವಿಕೆಯುಳ್ಳವನಾದನು. ಲೇಖಕರು ಆ ಮಾತುಗಳನ್ನು ಹೀಗೆ ಹೇಳುತ್ತಾರೆ. "ಸಂಸಾರವೆಂಬುದು ನೀರ ಮೇಲಿನ ಗುಳ್ಳೆಯಿದ್ದಂತೆ, ಜಗದಗಲ, ಮುಗಿಲಗಲ, ಪಾದ ಪಾತಾಳದಿಂದತ್ತತ್ತೆ ನಿಮ್ಮ

ಶ್ರೀ ಮುಕುಟ-ಬ್ರಹ್ಮಾಂಡದಿಂದತ್ತ. ನಿಕ್ಷೇಪವ ಮಾಡಿಕೊಂಡಿಪ್ಪ" ಎಂದು ಜಪಿಸುತ್ತ ದೇವನ ಹಂಬಲಕ್ಕೆ ಈ ದೇಹವನ್ನು ಮೀಸಲಾಗಿಡುವೆನು. ಇದೋ ನಾನು ಹೊರಟೆ, ನಾನಿನ್ನು ಸನ್ಯಾಸಿ, ವಿರಾಗಿಯು ನಾನು ಯಾವುದಕ್ಕೂ ಆಸೆಪಟ್ಟಿಲ್ಲ, ಮೋಹ ಕಳಚಿ ಹಾಕಿದ್ದೇನೆ. ನನ್ನ ಒಡೆಯನನ್ನು ಕಾಣುವ ಉತ್ಕಟ ಇಚ್ಛೆಯಲ್ಲಿದ್ದೇನೆ, ನೀವ್ಯಾರೂ ನನ್ನ ಬೆನ್ನು ಹತ್ತಬೇಡಿ ಮತ್ತು ನನಗೆ ವಿರೋಧ ಮಾಡಬೇಡಿರೆಂದು ಎಲ್ಲರನ್ನೂ ಬೀಳ್ಕೊಟ್ಟು, ಸೊಗಲ ಗುಡ್ಡವನ್ನು ಹತ್ತಲು ದಿಗಂಬರನಾಗಿಯೇ ಹೊರಟನು. ಅಲ್ಲಿರುವ ಸೂಜಿಯಾಕಾರದ ಬಂಡೆಗಲ್ಲಿನ ಮೇಲೆ ಸೂರ್ಯ ತಪಸ್ಸು ಕೈಗೊಂಡನು"[೪]

ಜ್ಞಾನಿಯಾದ ಶಿವಯ್ಯನು ಇಂದಿಗೆ ನಾನು ನೀನು ಎನ್ನುವಂಥ ಸ್ಥಿತಿಯಲ್ಲಿ ಎನ್ನ ಅಂಗ ಗುಣಗಳೆಲ್ಲ ಅಳಿದು ಲಿಂಗ ಗುಣಗಳಾಗಿ ನೀನೇ ನಾನು ಎನ್ನುವಂತಾಗಿದೆಯೆಂಬು ಎಲ್ಲವನ್ನು ತ್ಯಜಿಸಿದ ಶಿವಯ್ಯನು ನಿಜದ ನಿಲುವನ್ನು ಹುಡುಕಲು ಸೊಗಲದ ಗುಡ್ಡವನ್ನೇರಿ ಸೂಜಿಗಲ್ಲಿನ ತುಕ್ತತುದಿಯ ಮೇಲೆ ೧೨ ವರ್ಷಗಳವರೆಗೆ ಧ್ಯಾನ-ತಪಸ್ಸು-ಯೋಗಗಳಲ್ಲಿ ತೊಡಗಿದನು. ನಿರಾಹಾರಿಯಾಗಿ ಸಕಲ ಜ್ಞಾನಿಯಾದ ಶಿವಯ್ಯನು ಆ ಕತ್ತಲೆಯಲ್ಲಿ ಯಾವ ತೆರನಾಗಿದ್ದನೋ, ಹೇಗಿದ್ದನೋ ಯಾರು ಬಲ್ಲವರಿಲ್ಲ? ಆದರೆ ಶಿವಯ್ಯನು 'ಶಿವಯೋಗಿ' ಆದದ್ದು ಇಲ್ಲಿಯೇ ಆ ಕಾಲವು ಶಿವಯೋಗಿಗಳಿಗೆ ಬೆಳಕಿನ ಕಾಲವಾಗಿತ್ತೆನ್ನಬೇಕು. ಹನ್ನೆರಡು ವರ್ಷಗಳಿಗೆ ಮೂರು ತಿಂಗಳು ಕಡಿಮೆಯಿತ್ತು. ಶ್ರೀ ಗುರು ತೋರಿದ ಯೋಗದ ಪರಿಪೂರ್ಣಾಚರಣೆಯಿಂದ 'ಶಿವಯೋಗಿ'ಯಾಗಿ ಮಾರ್ಪಡುವಷ್ಟರಲ್ಲಿಯೇ ಕುಳ್ಳೂರು ಹತ್ತಿರವಿರುವ ಬೂದನೂರಿನ ಶರಣರಿಬ್ಬರಾದ ಗಿರಿಯಪ್ಪ ಮತ್ತು ಮಲ್ಲಪ್ಪನವರು ಬಂದು ಶಿವಯೋಗದಲ್ಲಿರುವ ಶಿವಯೋಗಿಯನ್ನು ಕಂಡರು. ಆ ಮಹಾಮಹಿಮನನ್ನು ಎಚ್ಚರಗೊಳಿಸಿ ಆಶೀರ್ವಾದ ಪಡೆದು ಕುಳ್ಳೂರಿಗೆ ತರುವಲ್ಲಿ ಯಶಸ್ವಿಯಾದರು. ಆ ಸೊಗಲದ ಶಿವಯೋಗಿಯೇ ಕುಳ್ಳೂರು ಕಲ್ಮಠದ ರೂವಾರಿ ಮತ್ತು ಪ್ರಪ್ರಥಮ ಪೀಠಾಧಿಪತಿಗಳಾದರು.

೧೮೪೦-೫೦ ಕಾಲದಲ್ಲಿ ಕುಳ್ಳೂರಿಗಾಗಮಿಸಿದ 'ಶಿವಯೋಗಿಗಳು' ಪುರಾಣ-ಪ್ರವಚನಗಳ ಮೂಲಕ ಕುಳ್ಳೂರು ಸುತ್ತಮುತ್ತಲಿನ ಭಕ್ತರ ಗಮನ ಸೆಳೆಯುತ್ತಾರೆ. ದೂರದ ಊರುಗಳಿಂದಲೂ ಅನೇಕ ಭಕ್ತರು ಇವರ ದರ್ಶನ ಭಾಗ್ಯ ಪಡೆಯಲು ಬರುತ್ತಾರೆ. ಭಕ್ತರಿಗಾಗಿ ಅನ್ನ ದಾಸೋಹ-ಜ್ಞಾನದಾಸೋಹದ ವ್ಯವಸ್ಥೆ ಮಾಡಿಸುತ್ತಾರೆ. ಅನ್ನದಾಸೋಹದ ಸೇವೆ ದಿನದ ಇಪ್ಪತ್ನಾಲ್ಕು ಗಂಟೆಗಳ ಕಾಲವೂ ಅಂದಿನಿಂದ ಇಂದಿನವರೆಗೂ ನಡೆಯುತ್ತ ಬಂದಿದೆ. ಅಂಬಲಿ-ಕಿಚಡಿಯನ್ನು ಶ್ರೀ ಮಠದಲ್ಲಿ ಸವಿದವನ ಜೀವನ ಪಾವನವಾಗುತ್ತದೆ. ಇದೇನೂ ಪವಾಡವಲ್ಲ, ಅಂತಹ ಬರಗಾಲದ ಸಂದರ್ಭಗಳಲ್ಲೂ ಅನ್ನದಾಸೋಹದ ಬಾಗಿಲು ಸದಾ ತೆರೆದಿರುತ್ತದೆ. ಇದೆಲ್ಲಕ್ಕೂ ಕಾರಣ ಶ್ರೀ ಶಿವಯೋಗಿಗಳ ಮಹಿಮೆಯಿಂದಾದುದ್ದೆಂಬುದನ್ನು

ಮರೆಯುವಂತಿಲ್ಲ. ಮಹಾಮಹಿಮನ ಮಹಿಮೆ ಜಗದಗಲ ಹಬ್ಬುತ್ತದೆ, ಇಂಚಲದಲ್ಲಿಯೂ ಬೃಹತ್ ಮಠದ ಸ್ಥಾಪನೆಯಾದುದು ಇವರಿಂದಲೇ ಎಂಬುದನ್ನು ಲೇಖಕರು ಪ್ರತಿಪಾದಿಸಿದ್ದಾರೆ. ಕುಳ್ಳೂರು-ಇಂಚಲ ಮಠಗಳು ಅಂದು ಈ ಭಾಗದ ಜ್ಞಾನ ದೇಗುಲಗಳು-ಅನ್ನದಾಸೋಹದ ಛತ್ರಗಳಾಗಿ, ನೊಂದವರ, ಬಳಲಿದವರ ದುಖಃ ನಿವಾರಣೆ ಮಾಡಿದ ಪ್ರಮುಖ ಕೇಂದ್ರಗಳು ಎಂಬುದಾಗಿ ಲೇಖಕರು ಹೇಳಿದ್ದುದು ಗಮನಾರ್ಹವಾದುದು. ಏಕೆಂದರೆ ಮಠಗಳಿಂದ ಕೇವಲ ದಾಸ್ತಾನು ಮಳಿಗೆಗಳಾಗಬಾರದು. ಸಂಗ್ರಹಿಸಿದ ಯಾವುದೇ ವಸ್ತುವು ಭಕ್ತರಿಂದ ಬಂದುದನ್ನು ಭಕ್ತರಿಗೆ ಧಾರೆಯೆರೆಯಬೇಕೆಂಬುದಾಗಿ ಎಚ್ಚರಿಕೆಯ ಮಾತುಗಳನ್ನು ಇಂದಿನ ಮುಂದಿನ ಜನ ಸಮುದಾಯಕ್ಕೆ ತಿಳಿಯಪಡಿಸಿದ್ದಾರೆಂದೆನಿಸುತ್ತದೆ.

ಶಿವಯೋಗಿಗಳು ಇಳಿ ವಯಸ್ಸಿನವರಾಗಲು ಜೇಷ್ಠ ಪುತ್ರನಾದ ಸೋಮಯ್ಯನಿಗೆ ಇಂಚಲ ಮಠದ ಜವಾಬ್ದಾರಿಯನ್ನು ಒಪ್ಪಿಸುತ್ತಾರೆ. ಇತ್ತ ಕುಳ್ಳೂರು ಕಲ್ಮಠದಲ್ಲಿ ಶ್ರೀ ರೇವಯ್ಯ ಮಹಾಸ್ವಾಮಿಯವರಿಗೆ ವಹಿಸಿಕೊಳ್ಳುತ್ತಾರೆಂದು ಲೇಖಕರು ಹೇಳಿರುವರು. ಸೋಮಯ್ಯನು ತನ್ನ ತಂದೆಯನ್ನು ಗುರು ಎಂದೇ ಭಾವಿಸಿದ್ದನು. ಶಿವಯೋಗಿಗಳು ಎರಡೂ ಮಠಗಳಲ್ಲಿರುತ್ತಿದ್ದರು. ಅಂದು ಕಾಲ್ನಡಿಗೆಯ ಪಯಣವಾಗಿತ್ತು. ಕುಳ್ಳೂರು-ಇಂಚಲ ಮಠಗಳನ್ನು ಭೂಕೈಲಾಸವನ್ನಾಗಿ ಪರಿವರ್ತಿಸಿದವರು. ದೇವಿ ಪುರಾಣವನ್ನು ಸತತವೂ ಪಾರಾಯಣ ಮಾಡಿದವರು. ಎಲ್ಲವನ್ನು ಸಮಾನತೆಯ ದೃಷ್ಟಿಯಿಂದ ಕಂಡವರು. ಸುಚಿತ್ತ ಮತ್ತು ದಿವ್ಯಜ್ಞಾನದ ಆಗರವೇ ಅವರಾಗಿದ್ದರು. ಶಿವಯೋಗಿಗಳು ಐಕ್ಯಸ್ಥಲದ ನಿಲುಮೆಯ ಮಾತುಗಳನ್ನಾಡುತ್ತಿದ್ದರು. ಭಕ್ತಿಯಿಂದ ನಡೆದುಕೊಂಡು ಷಟ್‌ಸ್ಥಲ ಮಾರ್ಗವನ್ನ ಅನುಸರಿಸಿ ಮುಕ್ತಿಯನ್ನು ಪಡೆಯಲು ಸದಾ ಭೋಧಿಸುತ್ತಿದ್ದರು. ಅಂದಿನ ಕಾಲದಲ್ಲಿ ಶರಣರ ಪಡೆಯನ್ನೇ ಸಿದ್ಧ ಪಡಿಸಿದರು. ಎಲ್ಲರ ಮನಸ್ಸನ್ನು ನಿರ್ಮಲಗೊಳಿಸಿದವರು. 'ಓ ನಮಃ ಶಿವಾಯ' ಎಂಬ ಮಂತ್ರದ ಪಠಣ ಮತ್ತು ಮಹತ್ವತೆಯನ್ನು ತಿಳಿಸಿ ಆಚರಿಸಲು ಬೋಧಿಸಿದರು. ಇಂಚಲ ಜನತೆಗೆ ಒಂದು ಕಿವಿಮಾತು ಹೇಳಿದರು. ೩ ವರ್ಷ, ೩ ತಿಂಗಳು, ೩ ದಿವಸಗಳ, ಅವಧಿಯವರೆಗೂ ಅನವರತವೂ ಕ್ರಿಯಾಭಜನೆ ಮಾಡಿರಿ. ನಿಮ್ಮೀ ಇಂಚಲಪುರವು ಮುತ್ತಿನ ಗೊಂಚಲವಾಗುವುದೆಂದಿದ್ದರು. ಆ ರೀತಿಯಾಗಿದೆಯೆಂಬುದನ್ನು ನೋಡಿದ ಯಾರಿಗಾದರೂ ಅನ್ನಿಸದಿರದು. ಮೂಲದಲ್ಲಿ ಪ್ರತಿಷ್ಠಾಪನೆಗೊಂಡ ಕುಳ್ಳೂರು ಶ್ರೀ ಮಠಕ್ಕೆ ಬಂದರು. ಎರಡೂ ಮಠಗಳ ನಿರ್ವಹಣೆ ಮಾಡಿದರು. ಕುಳ್ಳೂರಿಗೆ ರೇವಯ್ಯನವರ ಆಗಮನ ಶಿವಯೋಗಿಗಳಿಗೆ ಸಂತಸ ತರುತ್ತದೆ. ಅವರಿಗೆ ಶ್ರೀ ಮಠಗಳೆರಡರ ಹೊಣೆಗಾರಿಕೆಯನ್ನು ಹೊರಿಸುತ್ತಾರೆ. ಆದರೂ ತಿರಸ್ಕರಿಸಲಿಲ್ಲ. ಭಕ್ತರ ಕಾಮನೆಗಳನ್ನು ಈಡೇರಿಸುತ್ತ ಹೋಗು ಎಂಬುದಾಗಿ ಆಶೀರ್ವದಿಸುವಷ್ಟರಲಿಯೇ ಶಿವಯೋಗೀಶ್ವರರು ಈಶ್ವರತ್ವ ಪದವಿ ಪಡೆದಿದ್ದರು. ಶ್ರೀಯವರು

ಐಕ್ಯರಾದ ಸಮಯ ೧೮೮೦-೮೫ ಆಗಿತ್ತು ಶರಣರ ಪಡೆಯು ಕೂಡಿತು. ರೇವಯ್ಯನವರ ನೇತೃತ್ವದಲ್ಲಿಯೇ ಕುಳ್ಳೂರು ಕಲ್ಮಠದಲ್ಲಿ ಕರ್ತೃ ಗದ್ದುಗೆಯನ್ನು ನಿರ್ಮಿಸಲಾಯಿತೆಂದು ಲೇಖಕರು ಚರಿತ್ರೆಯಲ್ಲಿ ಬರೆಯುತ್ತಾರೆ.

ಈ ಕೃತಿಯು ಮೌಲಿಕವಾದುದಾಗಿದೆ. ಸಂಧರ್ಬೋಚಿತವಾಗಿ ವಚನಗಳ ಬಳಕೆ ಮತ್ತು ಷಟ್ಪದಿ, ಪದ್ಯಗಳ ಸೊಗಸಾದ ಮತ್ತು ಸ್ವರಚಿತ ಕವಿತೆಗಳನ್ನು ಅಲ್ಲದೆ ತ್ರಿಪದಿಗಳನ್ನು ಬಳಸಿಕೊಂಡದ್ದು, ಗಮನಾರ್ಹ ಸಂಗತಿಯಾಗಿದೆ. ಶ್ರೀ ಶಿವಯೋಗಿಗಳ ಬಾಲ್ಯ, ಬಾಲಲೀಲೆ, ಆತ ಬೆಳೆಯುವ ಕ್ರಿಯೆ ಮುಂತಾದ ಘಟನೆಗಳನ್ನು ಹೇಳುವಾಗ ಸೊಗಸಾದ ತ್ರಿಪದಿಗಳನ್ನು ಬಳಸಿದ್ದುದು ಈ ಚರಿತ್ರೆಗೆ ಕಳೆ ತಂದಿದೆ. ತಂದೆ-ತಾಯಿ, ಗುರು-ಶಿಷ್ಯ, ಶಿವಯೋಗಿ-ಭಕ್ತವೃಂದ, ಶಿವಯೋಗಿ-ಸೋಮಯ್ಯ, ರೇವಯ್ಯ-ಶಿವಯೋಗಿ-ಊರಜನತೆ ಮತ್ತು ಸಿದ್ದಯ್ಯನ ಮಗ ಶಿವಯೋಗಿ ಎಲ್ಲ ಪಾತ್ರಗಳ ಮೂಲಕ ಮಾಡಿದ ಸಂವಾದ ಅರ್ಥಪೂರ್ಣವಾಗಿದೆ. ಈ ಕೃತಿ ಓದುಗರ ಗಮನವನ್ನು ತೀವ್ರವಾಗಿ ಸೆಳೆಯುತ್ತದೆಯೆನ್ನುವಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

**೨. ಕುಳ್ಳೂರು ಕಲ್ಮಠದ ಶ್ರೀ ಸದ್ಗುರು ರೇವಯ್ಯ ಮಹಾಸ್ವಾಮಿಗಳು**

ಎರಡನೆಯದಾದ ಈ ಕೃತಿ ಶ್ರೀ ಸದ್ಗುರು ರೇವಯ್ಯ ಮಹಾಸ್ವಾಮಿಗಳ ಚರಿತ್ರೆಯೆಂಬುದಾಗಿದ್ದು; ಇವರು ಶಿವಯೋಗೀಶ್ವರ ಪರಮ ಶಿಷ್ಯರೂ ಆದವರು, ಚಿಲಮಿಯವರ ಹುಟ್ಟೂರಾದ ಹೊಸಕೋಟೆ ಗ್ರಾಮದವರೆಂಬುದರಿಂದ ಇಂತಿವರ ಚರಿತ್ರೆ ಬರೆಯುವಲ್ಲಿ ವಿಶೇಷ ಕಾಳಜಿ ವಹಿಸಿದಂತೆ ಕಂಡು ಬರುತ್ತದೆ. ಈ ಕೃತಿಯು ೯೩ ಪುಟಗಳುಳ್ಳ ೮ ಅಧ್ಯಾಯಗಳಲ್ಲಿ ನಿರೂಪಿತಗೊಂಡಿದೆ. ಬಾಲ್ಯದಿಂದಲೇ ಕುಳ್ಳೂರು ಕಲ್ಮಠದ ಶಿವಯೋಗಿಗಳಲ್ಲಿದ್ದುಕೊಂಡೇ ಬೆಳೆದವರು ರೇವಯ್ಯ ಸ್ವಾಮಿಗಳು. ಅವರ ವಾಣಿಯನ್ನಾಲಿಸಿದ ರೇವಯ್ಯ ಶ್ರೀ ಮಠವನ್ನೆಂದು ತೊರೆಯುವುದೇ ಇಲ್ಲ. ಬಯಲು ಸೀಮೆಯ ಊರುಗಳಾದುದರಿಂದ ಬರಗಾಲದ ಬವಣೆಗಳೂ ತಪ್ಪಿರಲಿಲ್ಲ. ಆಗ ಸ್ವಾತಂತ್ರ್ಯಪೂರ್ವದಲ್ಲಿ ಪ್ಲೇಗು ಮಾರಿಕಾ ಬೇನೆಗಳ ಪೀಡನೆ ಕಾಟವು ಯಾವತ್ತೂ ಇರುತಿತ್ತು. ರೇವಯ್ಯನವರ ತಂದೆ-ತಾಯಿಗಳು ದಿನಸಿ ವ್ಯಾಪಾರ, ಬಳೆ ವ್ಯಾಪಾರ ಮಾಡುತ್ತ ಊರೂರು ಅಲೆಯುತ್ತಿದ್ದರು. ಆದರೆ ಒಂದು ಸಲ ಭಯಂಕರ ಮಾರಿ-ಪ್ಲೇಗು ಬೇನೆ ಪಸರಿಸುತ್ತದೆ. ನನ್ನ ಮಗ ರೇವಯ್ಯ ಕಲ್ಮಠದಲ್ಲಿ ಸುರಕ್ಷಿತವಾಗಿ ಶಿವಯೋಗಿಗಳ ಹತ್ತಿರವಿರುತ್ತಾನೆಂದು ಭಾವಿಸಿ ಅವರಲ್ಲಿ ಬಿಟ್ಟು ಹೋಗುತ್ತಾರೆ. ಬರಗಾಲ ಸರಿದು ಸುಖಃ ಕಾಲ ಪ್ರಾಪ್ತವಾದಾಗ ತಂದೆ-ತಾಯಿಗಳು ರೇವಯ್ಯನನ್ನು ಕರೆದೊಯ್ಯಲು ಬರುತ್ತಾರೆ. ಆದರೆ ಆತ ಉಸಿಕಿನಾಟದಲ್ಲಿ ತೊಡಗಿದ್ದ, ಬಂದರೆ ಕರೆದೊಯ್ಯಿರೆಂದು ಶಿವಯೋಗಿ ಸ್ವಾಮಿಗಳು ಹೇಳಿದರು. ಪ್ರಯತ್ನಿಸಿ ಪ್ರಯತ್ನಿಸಿ ಸೋತರು. "ನಾನು ಈ ಅಜ್ಜನ ದೊಡ್ಡ ಮನೆಯಲಿಯೇ ಇರ್ತೀನಿ ನಿಮ್ಮದು ಸಣ್ಣ ಮನಿ ಐತಿ ನಾ

ಬರೋದಿಲ್ಲ" ಎಂದು ನುಡಿದು ಹಟ ಓಡಿದ ರೇವಯ್ಯನು ಕೊನೆಗೂ ತಂದೆ ತಾಯಿಗಳಲ್ಲಿಗೆ ಹೋಗಲೇ ಇಲ್ಲ. ಶ್ರೀ ಮಠದಲ್ಲಿಯೇ ಪೂಜ್ಯರ ಸಹವಾಸ ಅವರ ವಾಟಗಳು ಯಾವ ಕಡೆಗೂ ಸುಳಿಯದಂತೆ ಮಾಡಿದವು ಎಂಬುದನ್ನು ಲೇಖಕರು ರಮ್ಯವಾಗಿ ಚಿತ್ರಿಸಿದ್ದಾರೆ.

ಸಾವು ಶರೀರಕ್ಕೆ ಆತ್ಮಕ್ಕಲ್ಲ! ಈ ಆತ್ಮವು ಪರಮಾತ್ಮನ ಮಹಾಮಂದಿರವಿದ್ದಂತೆ ಆತ್ಮನಿಗೆ ಅಳಿವು ಎಂಬುದಿಲ್ಲ. ಅರಿವು ಅನುಭವಕ್ಕೆ ಬಂದು ಆಚರಣೆಯಲ್ಲಿ ತರಬೇಕು. ಅಂದಾಗ ಮಾತ್ರ ಸಾವಿನ ಭಯವು ನಿವಾರಣೆಯಾಗಿ ಮುಕ್ತನಾಗಬಲ್ಲ. ಅಂಥವನನ್ನೇ ಮಹಾಜ್ಞಾನಿಯೆಂದು ಕರೆಯುವರು. ಇಂದು ನಮ್ಮೆಲ್ಲರ ಮಧ್ಯದಲ್ಲಿರುವ ರೇವಯ್ಯನೇ ನಿಜ ಜ್ಞಾನಿ–ಸುಜ್ಞಾನಿ–ನಾನು ಹೇಳಿದಂತೆ–ನೆಲ ಮಾಳಿಗೆಯಲ್ಲಿರುವ 'ದೇವಿ ಪುರಾಣ' ಗ್ರಂಥವನ್ನು ಕಾಳ ಕತ್ತಲೆಯಾದರೂ ಸಾವಿಗೆ ಹೆದರಟೇ ತಂದು ಕೊಟ್ಟದ್ದರಿಂದ ಇಂದಿನ ಪ್ರವಚನ ಸಾಂಗವಾಗಿ ನೆರವೇರಿತು. ಅಂಥ–ಧೈರ್ಯ ಸಾಹಸ ಮಾಡಲಾರದ ಸೋಮಯ್ಯನಿಗೆ ತರಲು ಹೇಳಿದರೆ 'ಸರ್ಪವಿದೆ–ಹಾವು ಇದೆ' ಎಂದು ಹೆದರಿ ಪವಿತ್ರವಾದ ಗ್ರಂಥ ತರದೇ ಸಾವಿಗೆ ಹೆದರಿ ಓಡಿ ಬಂದ, ಆದರೆ ಸಾವಿಗಂಜದೇ ರೇವಯ್ಯ ಆ ವೃದ್ಧತಂದನು. ರೇವಯ್ಯ ಸಾವನ್ನೇ ಗೆದ್ದವನಾದುದರಿಂದ ಮುಂದೆ ಮಹಾಜ್ಞಾನಿಯಾಗಿ, ಗುರುವಾಗಿ ಈ ಮಠವೆಂಬ ನಾವೆಯಲ್ಲಿ ಕುಳಿತು ಹುಟ್ಟು ಹಾಕಬಲ್ಲ ಯೋಗ್ಯ ನಾವಿಕನಾಗುತ್ತಾನೆ. ಈತನು ಶ್ರೀ ಕಲ್ಮಠದ ಮುಂದಿನ ಉತ್ತರಾಧಿಕಾರಿಯಾಗುವನೆಂದು ಶ್ರೀಗಳು ಘೋಷಿಸಿ ಆಶೀರ್ವಾದಿಸಿದರು. ಲೇಖಕರು ರೇವಯ್ಯನ ಮಹಿಮೆಯನ್ನು ಹೀಗೆ ಹೇಳುತ್ತಾರೆ.

"ಧಾರುಣಿಯ ಭಕ್ತರನು ಪೊರೆಯಲು
ಮಾರಮರ್ದನ ವೀರಭದ್ರನು
ಶ್ರೀ ರೇವಯ್ಯ ಸಿದ್ಧೇಶ ಭೂಮಿಯೊಳು ತಾಳ್ದವತಾರ
ವೀರಭದ್ರನೆ ಸಿದ್ಧರಾಮನು
ಮಾರಹರ ಶಿವಯೋಗಿ ಸೊಗಲದಾ
ಶ್ರೀರೇವಣಸಿದ್ಧಯ್ಯ ರೇವಯ್ಯಂದು ಜನಿಸಿದರು."[೫]

ಎಂಟೂ ಅಧ್ಯಾಯಗಳಲ್ಲಿ ರೇವಯ್ಯನವರ ಜೀವನ ಚರಿತ್ರೆ ವಿಸ್ತಾರಗೊಳ್ಳುತ್ತದೆ. ಶಿವಯೋಗೀಶ್ವರರು ಲೋಕೋದ್ಧಾರದ ಮಣಿಹವನ್ನಾಗಿ ತನ್ನ ಅನುಗ್ರಹ ಶಕ್ತಿಗಳನ್ನು ರೇವಯ್ಯನವರೆಂಬ ಚೇತನದಲ್ಲಿ ಇಳಿಸಿ, ಅವರನ್ನು ಲೋಕದ ಸೇವೆ ಮತ್ತು ಉದ್ಧಾರಕ್ಕಾಗಿ ಅಣಿ ಮಾಡಿದರೆಂದು ಉಲ್ಲೇಖಿಸಿದ ಲೇಖಕರು, ದೇವನ ಅವತಾರಿಕರಾದ ರೇವಯ್ಯನವರು ಧರ್ಮ ಜಾಗೃತಿ ಮತ್ತು ಮಾನವೀಯ ಮೌಲ್ಯಗಳನ್ನು ಗುರುತಿಸುವ ಜವಾಬ್ದಾರಿ ಹೊತ್ತು ಬಂದಿರುವರು; ಅಲ್ಲದೆ ಶ್ರೀ ಶಿವಯೋಗೀಶ್ವರರ ಆಜ್ಞೆ ಮತ್ತು ಸಂಕಲ್ಪಗಳನ್ನು ಪೂರೈಸಲು

ಬಂದ ಮಹಾಮಹಿಮರೆಂದಿದ್ದಾರೆ. ಆದುದರಿಂದ ಮಹಾ ಪುರುಷನಾದ ರೇವಯ್ಯನವರಿಗೆ ಶಿವಯೋಗಿಗಳು ನಡೆದುದೇ ದಾರಿ –ನುಡಿದುದೇ ವೇದವಾಕ್ಯವಾಗಿತ್ತು. ಅಂತಹ ಪರಮಶಿಷ್ಯನನ್ನು ಪಡೆದೆನೆಂದು ಬಹು ಸಂತಸದಿಂದ ಶ್ರೀ ಶಿವಯೋಗಿಗಳು ಐಕ್ಯರಾದರು. ಆದರೆ ರೇವಯ್ಯನವರು ದುಖಃ ತಪ್ತರಾಗಿ ಕಣ್ಣೀರು ಸುರಿಸಿದರು.

ತಂದೆ–ಮಗ, ತಾಯಿ–ಮಗನಂತೆ ವಾತ್ಸಲ್ಯ–ಮಮತೆ–ಪ್ರೀತಿ ಅನುರಾಗ ಶಿವಯೋಗೀಶ್ವರರು ಮತ್ತು ರೇವಯ್ಯನವರಲ್ಲಿತ್ತು ಎಂಬುದನ್ನು ಚರಿತ್ರೆಯೋದಿದಾಗ ತಿಳಿದು ಬರುವ ಅಂಶವಾಗಿದೆ.

ಶಿವಯೋಗೀಶ್ವರರ ಕರಸಂಜಾತರೆನಿಸಿದ ರೇವಯ್ಯನವರ ಗುರುಲಿಂಗ ಜಂಗಮ, ಪೂಜೆ–ಜಪ–ತಪಗಳ ಮಹಿಮೆ ಅಗಾಧವಾದುದು. ಅವರು ಅನ್ನ ನೀರಿನ ಬರವಿದ್ದ ಊರುಗಳನ್ನು ಸುಖ–ಸಮೃದ್ಧಿಯನ್ನಾಗಿಸಿದವರು ತ್ರಿವಿಧ ದಾಸೋಹಿ, ಈಶ ಸೇವೆಗಿಂತಲೂ ಶರಣರ–ಜನರ ಸೇವೆಯೇ ಮಿಗಿಲಾದುದೆಂದು ಭಾವಿಸಿದ ಭಕ್ತಿಯ ಭಾವಜೀವಿ ಮಹಾಮಾನವರಾಗಿದ್ದರು. ಇಂಥ ಮಹಾತ್ಮನು ಜನಿಸಿದ ಪುರವು ಖ್ಯಾತಿಯನ್ನು ಹೊಂದುವಂತಾಯಿತು.



“ಭೂಮಿಯೊಳು ಮೆರೆಯುತ್ತಲಿಹವರ
ರಾಮದುರ್ಗ ತಾಲೂಕಿನೊಳು
ಗ್ರಾಮ ಗುತ್ತಿಗೋಲಿ ಹೊಸಕೋಟೆಂಬುದು ಮಹಾಪುರಂ
ಆ ಮಹಾಪುರ ಒಕ್ಕಲಿಗರಿಂ
ಸೋಮದರ ಭಕ್ತಕಾಶ್ವೀನ
ಹೋಮ ವಿದ್ಯಾ ದೃಷ್ಟಿಯಿಂದಲು ಮುಂದುವರೆದಿಹದು”[೬]

ರಾಮದುರ್ಗ ತಾಲೂಕಿನ ಗುತ್ತಿಗೋಳಿ–ಹೊಸಕೋಟೆ ಗ್ರಾಮವು ಕುಳ್ಳೂರಿಗೆ ನಾಲ್ಕು ಕಿ.ಮಿ. ಅಂತರದಲ್ಲಿರುವ ಈ ತಾಲೂಕಿನ ಕಟ್ಟಕಡೆಯ ಗ್ರಾಮ ದವಸ–ಧಾನ್ಯಗಳನ್ನು ಒಕ್ಕುವ ಒಕ್ಕಲುತನದ ಮನೆತನಗಳಿಂದಲೂ, ಸಂಪತ್ತು ವಿದ್ಯಾ, ಧರ್ಮ, ಸಂಸ್ಕೃತಿಯ ದೃಷ್ಟಿಯಿಂದಲೂ ರಮಣೀಯ ಮತ್ತು ಭಕ್ತಿಯ ಕೇಂದ್ರವೆನಿಸಿದೆ. ಆ ಊರಿನ ವರ್ಣನೆಯನ್ನು ಬಹು ಸುಂದರವಾಗಿ ಚಿಲಮಿಯವರು ಚಿತ್ರಿಸಿದ್ದಾರೆ. ಇಂಥ ಊರಲ್ಲಿ ರೇವಯ್ಯನವರ ಜನನವಾಗುತ್ತದೆಯೆಂದು ಹೇಳುತ್ತಾ ಈ ಮಹಾಮಹಿಮನ ಜನ್ಮಧಾರಣೆಯಿಂದಾಗಿ ಈ ಗ್ರಾಮಕ್ಕೆ ವಿವಿಧ ದಾರ್ಶನಿಕರು, ಧರ್ಮ ದೃಷ್ಟಾರರು, ದರ್ಶನಕೊಟ್ಟು ಆಶೀರ್ವದಿಸಿ ಸುಖಃ ಸಮೃದ್ಧಿಯ ಊರಾಗಲೆಂದು ಹಾರೈಸಿರುವರೆಂದು ಚಿತ್ರಿಸಿದ್ದಾರೆ. ಷಟ್ಪದಿಯು ಅದನ್ನು ಸಾಕ್ಷೀಕರಿಸುತ್ತದೆ.

“ಕಲಿತವರು ಸಾಕಷ್ಟು ನಮ್ಮಯ

ಲಲಿತ ಭಾರತ ದೇಶ ಮೊದಲನೆ
ಥಲದ ರಾಷ್ಟ್ರಪತಿಗಳಾದ ರಾಜೇಂದ್ರ ಪ್ರಸಾದ
ಒಲಿದು ಬಂದು ಹೋದ ಪಟ್ಟಣ
ಕಲಿಗಳು ಕಾಂಟ್ರಾಕ್ಟದಾರರು
ನಲುವಿನಿಂದಲಿ ಹೊಳೆಯುತ್ತಿಹುದಾ ಪುರವು ಹೊಸಕೋಟಿ"[೭]

ನಮ್ಮ ದೇಶದ ಪ್ರಪ್ರಥಮ ರಾಷ್ಟ್ರಪತಿ ಡಾ. ರಾಜೇಂದ್ರ ಪ್ರಸಾದ್, ನೆಹರೂ, ಗಾಂಧೀಜಿ, ಮೊರಾರ್ಜಿ ದೇಸಾಯಿ, ನಿಜಲಿಂಗಪ್ಪ ಮುಂತಾದ ರಾಷ್ಟ್ರೀಯ ಮುಖಂಡರು ಶ್ರೀ ರೇವಯ್ಯನವರ ದರ್ಶನಾಶೀರ್ವಾದ ಪಡೆಯಲು ಬಂದಿದ್ದರೆಂದು ಈ ಷಟ್ಪದಿಯಲ್ಲಿ ಬಣ್ಣಿಸಲಾಗಿದೆ.

ಮಹಾತ್ಮರು ಮೆಟ್ಟಿದ ಧರೆ ಪಾವನವೆನ್ನುವಂತೆ ದಿಗಂಬರಪ್ಪಸ್ವಾಮಿ ಅಕ್ಕಲಕೋಟೆಯ ಶರಣಪ್ಪ, ಅಜಾತ ನಾಗಲಿಂಗಜ್ಜ, ಆತ್ಮಾನಂದ-ಶಿವಾನಂದ ಮಲಿಕಾರ್ಜುನ ಸ್ವಾಮಿಗಳು, ಬಿಜಾಪುರ ಜ್ಞಾನಯೋಗಾಶ್ರಮದ ಶ್ರೀ ಸಿದ್ಧೇಶ್ವರ ಮಹಾ ಸ್ವಾಮಿಗಳು, ಶಂಕರ ಶಿವಾಚಾರ್ಯರು, ಇಂಚಗೇರಿಯ ಮತ್ತು ಮಹಾದೇವಪ್ಪನವರು ಹೀಗೆ ಹಲವಾರು ಸಾಧು ಸಂತರು, ಮಹಾಂತ- ಸತ್ಪುರುಷರು ಈ ನೆಲವನ್ನು ಮೆಟ್ಟಿದುದರ ಪರಿಣಾಮವಾಗಿ ಕಣಕಣದಲ್ಲಿಯೂ ಪವಿತ್ರತೆಯೂ ಬಾಚಿದೆ ಈ ಗ್ರಾಮಕ್ಕೆ ಎಂದು ಲೇಖಕ ಚಿಲಮಿ ಹೇಳುತ್ತಾರೆ.

ಶ್ರೀ ರೇವಯ್ಯನವರ ಸಮಕಾಲೀನರಾದ ಶ್ರೀ ಗಾಳೇಶ್ವರ ಅವಧೂತರು, ಮುನವಳ್ಳಿಯ ಭೂಮಿರಾಜರು, ಬೈಲಹೊಂಗಲದ ಶ್ರೀ ನಿರ್ವಾಣೆಪ್ಪನವರು ಇವರೆಲ್ಲರೂ ಮೆಟ್ಟಿದ ಧರೆ ಪಾವನವಾಗಿದೆಯೆಂದೂ ವರ್ಣಿಸಿದ್ದಾರೆ. ಹೊಸಕೋಟೆ ಪುರವು ಜಲಕನ್ಯೆಯರು ದರ್ಶನವಿತ್ತ, ಹೊಕ್ಕು ತುಂಬುವ ಭಾವಿಯೊಂದು ಮಂಗಲಮಯ ತುಂಬುಗಂಗೆಯಾಗಿ ಸದಾ ತುಂಬಿಕೊಂಡು ಈ ಭಾಗದ ಜನತೆಯ ನೀರಿನ ಕೊರತೆಯನ್ನು ನೀಗಿಸಿದ್ದಾಳೆ. ಕುಡಿಯುವ ನೀರಿಗಾಗಿ ಇಲ್ಲಿಯ ಎಂಥ ಭೀಕರ ಬರಗಾಲದಲ್ಲಿಯೂ ತತ್ತರಿಸಿಲ್ಲವೆನ್ನಿ; ಇದು ಇಂಥ ಪುಣ್ಯ ಪುರಷರ ಕೃಪಾಶೀರ್ವಾದವಲ್ಲದೆ ಮತ್ತೇನು? ಎನ್ನುತ್ತಾರೆ ಚಿಲಮಿ. ಇಂಥ ಸೊಬಗಿನ ಪರಿಸರದ ಊರಾದ ಹೊಸಕೋಟೆಯಲ್ಲಿ ವೀರಶೈವ ದಂಪತಿಗಳಿದ್ದರು. ಸತತವೂ ಏಕದೇವೋ ಪಾಸಕರಾಗಿದ್ದರು. ಅವರೆ ಈ ಚರಿತ್ರೆಗೆ ಕಾರಣೀ ಪುರುಷರಾದ ರೇವಯ್ಯಸ್ವಾಮಿಯವರ ತಂದೆ-ತಾಯಿಗಳು, ಖ್ಯಾತ ಕವಿ ಈರಪ್ಪ ಹಟ್ಟಿಹೋಳಿಯವರು ಭಾಮಿನಿ ಷಟ್ಪದಿಯ ಪದ್ಯದಲ್ಲಿ ಹೀಗೆ ಹೇಳುತ್ತಾರೆ.

"ಆಗ ಧರೆಯಲಿ ಮೆರೆವ ಗ್ರಾಮದಿ

ನಾಗಪ್ಪ ವೀರಮ್ಮ (ಬಳಿಗಾರ)ನ ಕಾತಿ
ನಾಗಧರ ಸದ್ಭಕ್ತ ದಂಪತಿ ವೀರಶೈವ ಕುಲಾ
ಲಿಂಗಾಯತ ಜಾತಿವಾಸ
ವಾಗಿದ್ದರಾ ಗಂಡ ಹೆಂಡಿರು
ಯೋಗಿ ಪೂಜೆಯು ಶಿವನ ಪೂಜೆಯೊಳಿರುತಿಹನಲ್ಲ"[೮]

ಹೊಸಕೋಟೆ ಗ್ರಾಮದ ನಾಗಪ್ಪ–ವೀರಮ್ಮ ಸದ್ಭಕ್ತ ದಂಪತಿಗಳು ಸತತವೂ ಯೋಗಿಗಳೆನಿಸಿದ ಗುರು–ಲಿಂಗ–ಜಂಗಮರ ಸೇವೆಯಲ್ಲಿ ತೊಡಗುತ್ತಿದ್ದರು. ಅಲ್ಲದೆ ಪಶುಪತಿಯುಪಾಸಕರಾಗಿದ್ದರು. ಇವರದು ಒಳ್ಳೆಯ ಸಂಸ್ಕಾರಯುತ ಪರಿವಾರ; ಸ್ವಾತಿಕ ಸ್ವಭಾವದವರು ಜಾತಿಯಿಂದ ಲಿಂಗಾಯಿತರಾದರೂ ವೃತ್ತಿಯಲ್ಲಿ ಮೂಲತಃ ಇವರ ಹಿರಿಯರು ಬಳೆತೊಡಿಸುವ ಕಾಯಕ ಮಾಡುತ್ತಿದ್ದರೆಂಬ ಹೇಳಿಕೆಯುಂಟು. ಇವರಲ್ಲಿ ಬಡತನವಿದ್ದರೂ ಹೃದಯ ಶ್ರೀಮಂತಿಕೆಯು ಅಪಾರವಾಗಿತ್ತು. ನಾಗಪ್ಪನವರ ಧರ್ಮಪತ್ನಿಯ ತವರೂರು ಕುಳ್ಳೂರಿನ ಕವಳಿಯವರ ಮನೆತನ, ನಾಗಪ್ಪನು ಊರೂರು ಸಂಚರಿಸುತ್ತ ಮಸಾಲೆಯ ತಿಸಿಸುಗಳ ವ್ಯವಹಾರವನ್ನು ಪ್ರಾಮಾಣಿಕತೆಯಿಂದ ಮಾಡುತ್ತ ಉಪಜೀವನ ಸಾಗಿಸುತ್ತಿದ್ದನು. ಇಬ್ಬರು ಸ್ವಾತಿಕ ಹಾಗೂ ಧರ್ಮನಿಷ್ಠೆಯ ಜೀವನ ಕಳೆಯುತ್ತಿದ್ದರು. ಇವರು ಪರಮ ಶಿವಭಕ್ತರಾಗಿದ್ದರು. ಇವರ ಮನೆಯ ದೇವರು ಶ್ರೀ ವೀರಭದ್ರದೇವರು. ಇವರ ಓಣಿಯಲ್ಲಿಯೇ ದೇವಾಲಯವಿದ್ದು ಆತನ ಆರಾಧನೆ–ಪೂಜೆಸಲ್ಲಿಸುತ್ತಲಿರುವುದರಿಂದ ಬಂದ ಪ್ರಸಾದವೇ ದೇವಾನ್ನ–ಪರಮಾನ್ನವಾಗಿತ್ತು. ವೀರಭದ್ರನಲ್ಲಿ ಪ್ರಾರ್ಥಿಸುತ್ತ ಪುತ್ರ ಸಂತಾನಕ್ಕಾಗಿ ಹಂಬಲಿಸುತ್ತಿದ್ದ ಈ ದಂಪತಿಗಳಿಗೆ ಕತ್ತಲೆಯು ದೂರವಾಗಿ ಬೆಳಕಿನೆಡೆಗೆ ಸಾಗುವಂತಾಯಿತು. ಮೊದಲನೆಯ ಗಂಡು ಮಗುವಿನ ಜನನವಾಗುತ್ತದೆ. ಆತನ ಹೆಸರು ಮಲ್ಲಪ್ಪ ಎಂಬುದಾಗಿ ಮಂಗಳವಾರವು ವೀರಭದ್ರದೇವನ ವಾರ ಕ್ರಿ.ಶ.೧೮೭೦ರಲ್ಲಿ ಪ್ರಾತಃ ಕಾಲದ ಮಂಗಳವಾರದಂದು ಎರಡನೆಯ ಗಂಡು ಮಗುವಿನ ಜನನವಾಗುತ್ತದೆ. ಆ ಕುಮಾರನೇ ಈ ಚರಿತ್ರೆಯ ನಾಯಕಮಣಿ ಆತನಿಗೆ ರೇವಣಸಿದ್ಧ–ರೇವಯ್ಯ ಎಂದು ನಾಮಕರಣ ಮಾಡುತ್ತಾರೆ.

ಈ ಎರಡೂ ಮಕ್ಕಳು ಕೂಡಿ ಆಡಿ ಬೆಳೆಯುತ್ತಿರಲು ಆಗ ಊರಿಗೆ ಪ್ಲೇಗು ಮಾರಿಬೇನೆಯು ದಾಳಿಯಿಡುತ್ತದೆ. ಭಯಂಕರವಾದ ಈ ಕಾಯಿಲೆಗೆ ಸಾಕಷ್ಟು ಜನತೆ ತುತ್ತಾಗಲು ಮಲ್ಲಪ್ಪ–ರೇವಯ್ಯನ ತಂದೆ ತಾಯಿಗಳಿಗೆ ಕಳವಳವಾಗುತ್ತದೆ. ಬಾಲಕರ ಅಳಿವು–ಉಳಿವಿನ ಸಮಸ್ಯೆಯಿಂದಾಗಿ ಈ ನನ್ನ ಕಂದಮ್ಮಗಳ ಗತಿ ಏನೆಂದು ಚಿಂತಿಸುತ್ತ ಕಂಗಾಲಾಗಿದ್ದರು, ಆ ಬಾಲಕರಿಬ್ಬರಿಗೂ ಈ ಭಯಂಕರ ಕಾಯಿಲೆ ಆವರಿಸಲು ನಿಶ್ಚೇಷ್ಟಿತರಾಗಿ ಮಲಗುತ್ತಾರೆ. ವೈದ್ಯಕೀಯ ವ್ಯವಸ್ಥೆ ಅಂದಿನ ಕಾಲದಲ್ಲಿರಲಿಲ್ಲ. ಕುಳ್ಳೂರಿನ ಶಿವಯೋಗೀಶ್ವರರ

ಪಾದಕ್ಕೆ ಹಾಕಿ ತಂದೆ-ತಾಯಿಗಳು ಪ್ರಾರ್ಥಿಸಿಕೊಂಡದ್ದು "ಅಪ್ಪಾ ಶಿವಯೋಗಿ ಈ ಪುಟ್ಟ ಮಕ್ಕಳು ನನ್ನವು ಅಲ್ಲ; ನಿನ್ನವು, ನಿನ್ನ ಈ ಮಕ್ಕಳನ್ನು ಉಳಿಸಿ ಕಾಪಾಡು" ಎಂದು ಅಂಗಲಾಚಿ ಪ್ರಾರ್ಥಿಸಿಕೊಂಡರು. ಮಕ್ಕಳಿಗೆ ಶಿವಯೋಗಿಯು ವಿಭೂತಿಯ ಭಸ್ಮವನ್ನು ಒಯ್ದು ಅದನ್ನು ಮಕ್ಕಳ ಪುಪ್ಪ ಎದೆಯ ಮೇಲೆ ಸವರೆಂದನು. ನಾಗಪ್ಪನು ಹಾಗೆಯೇ ಮಾಡಲು ಇಬ್ಬರೂ ಮಕ್ಕಳು ಚೇತರಿಸಿಕೊಂಡರು. ಊರಲಿರುವುದು ಉಚಿತವಲ್ಲ ಶ್ರೀಯವರ ಮಠದಲ್ಲಿಯೇ ಬಿಟ್ಟು ಬರಲು ನಿರ್ಧರಿಸಿದರು ಆ ಎರಡು ಮಕ್ಕಳು ಶಿವಯೋಗಿಗಳ ಮಠದಲ್ಲಿ ಹಾಯಾಗಿ ಬೆಳೆಯುತ್ತಿದ್ದರು. ಅನಂತರ ಕೆಲವು ವರ್ಷಗಳ ತರುವಾಯ ನಾಗಪ್ಪ-ವೀರಮ್ಮ ದಂಪತಿಗಳು ಮಕ್ಕಳನ್ನು ಕರೆಯಲು ಬಂದರೆ ರೇವಯ್ಯ ಬರಲು ಒಪ್ಪಲಿಲ್ಲ. ಮಲ್ಲಪ್ಪನನ್ನು ಮಾತ್ರ ಕರೆದುಕೊಂಡು ಹೊಸಕೋಟೆಗೆ ಬಂದರು. ರೇವಯ್ಯ ಶ್ರೀಗಳ ಮಠದಲ್ಲಿಯೇ ಉಳಿದುಕೊಂಡನು. ಮಠದಲ್ಲಿಯೇ ದೊಡ್ಡವನಾದ ಶಿವಯೋಗಿಗಳ ಅಂತರಂಗ ಹೇಳಿದ್ದೇನೆಂದರೆ ಈತ ಈ ಮಠದ ಹೊಣೆಗಾರನಾಗುತ್ತಾನೆಂದು. ಅವನು ಬಯಸಿದಂತೆಯೇ ಆದನು. ಶಿವಯೋಗಿಗಳ ಎಲ್ಲಾ ಗುಣ-ವಿದ್ಯೆಗಳನ್ನು ಕರಗತ ಮಾಡಿಕೊಂಡ ರೇವಯ್ಯ ಶ್ರೀಗುರುವಿನಿಂದ ಲಿಂಗದೀಕ್ಷೆ ಪಡೆದುಕೊಂಡನು. ಸೊಗಲ ಜಾತ್ರೆಗೆ ಕರದೊಯ್ದು ತಾವು ತಪಗೈದ ಗವಿಯಲ್ಲಿಯೇ ಸನ್ಯಾಸ (ಜಂಗಮ) ದೀಕ್ಷೆಯನ್ನು ಕೊಡಿಸಲು ಮುಂದಾದರು. ಆಗ ರೇವಯ್ಯನ ತಾಯಿಯೂ ಆಗಮಿಸಿದ್ದಳು. ತಾಯಿಯಿಂದಲೇ ಕಾವಿಯ ಕೌಪೀನ ಹಾಗೂ ಕುಲಾವಿ, ಕಫನಿಗಳನ್ನು ರೇವಪ್ಪನಿಗೆ ತೊಡಿಸಿದರು. ಅಂದಿನಿಂದ ರೇವಪ್ಪ ದೀಕ್ಷೆಯನ್ನು ಸಂಪಾದಿಸಿ 'ರೇವಯ್ಯನವರೆಂದು' ಪ್ರಖ್ಯಾತಿ ಹೊಂದಿದರು. ಅಂದಿನಿಂದ ರೇವಯ್ಯನವರ ಭವಬಂಧನವು ಇಲ್ಲದಂತಾಯಿತು. ತಾಯಿಯ ಅಮೃತ ಹಸ್ತದಿಂದಲೇ ರೇವಯ್ಯನು ಕೌಪೀನ ಧರಿಸಿ, ಸನ್ಯಾಸನಗೆಯ್ದು ಮಠದ ದಾಸೋಹಕ್ಕಾಗಿ ಸತತವೂ ಭಿಕ್ಷೆಯ ಕಾರ್ಯದಲ್ಲಿ ನಿರತವಾಗಿ ಶ್ರೀ ಮಠದ ಜೀರ್ಣೋದ್ಧಾರ ಕಾಯಕದಲ್ಲಿ ತೊಡಗಿದರು. ರೇವಯ್ಯನವರು ಗುರುವಿನಾಜ್ಞೆಯನ್ನು ಶಿರಸಾವಹಿಸಿ ಪಾಲಿಸಿದರು. ೧೯೪೨ರಲ್ಲಿ ಶ್ರೀ ಶಿವಯೋಗೀಶ್ವರರ ಗದ್ದುಗೆಯನ್ನು ಉತ್ತಮ ಹೊಡೆದ ಕಲ್ಲಿನಿಂದ ಕಟ್ಟಿಸಿದರು. ಆ ಸಮಯದಲ್ಲಿ ಭೀಕರ ಬರಗಾಲವಿದ್ದರೂ ಎರಡು ಚೀಲಗಳಷ್ಟು ಅನ್ನ ದಾಸೋಹ ಮಾಡಿಸಿದರು.

ರೇವಯ್ಯನವರು ಹರನಾಮವನ್ನು ಬಿಡದೇ ಜಪಿಸಿ ಶಿವಯೋಗಿಗಳ ಬಯಕೆಯನ್ನು ಪೂರೈಸಿದರು. ಕ್ರಿಯಾಶೀಲರಾಗಿ, ಜ್ಞಾನಾಸಕ್ತ, ಧ್ಯಾನಾಸಕ್ತರಾಗಿ ನಡೆದುಕೊಂಡರು. ಶಿವಯೋಗಿಗಳಿಂದ ಪಡೆದ ಜ್ಞಾನವನ್ನು ಕರ್ಮ ಕೋಟಲೆಗೆ ಸಿಲುಕಿಸಲಾರದೆ ಮುಕ್ತಿಯ ಸಲುವಾಗಿ ತೊಡಗಿಸುವ ಜೀವನದ ಬಯಕೆ ಅವರದಾಗಿತ್ತು. ರೇವಯ್ಯನವರಲ್ಲಿ ಗುರುವೂ ನೀನೆ, ಶಿವನೂ ನೀನೆ ಎಂಬ ನಂಬಿಕೆಯು ಸ್ಥಿರವಾಗಿ ಬೇರೂರಿತ್ತು. ಸರ್ವವೂ

ಶಿವಮಯವಾದಾಗ ಇಂಥವರ ಕೈಯಲ್ಲಿ ಸಿಕ್ಕ ಮಠಗಳು ಕೈಲಾಸವಾಗದಿದ್ದೀತೆ? ಅಮೃತ ತುಂಬಿದ ಕೊಡದಂತಿದ್ದ ರೇವಯ್ಯನವರು ಗುರುವಿನ ಮನೆಗೆ ಶುಭ ವಿದಾಯ ಹೇಳಿ ದೂರ ಬಂದ ಇವರು ಈ ಲೋಕವೇ ದೇವನ ಮನೆ, ಲೋಕದಲ್ಲಿರುವ ಜನರಿಗೆ ಅಂಟಿದ ಜಂಜಾಟವನ್ನು ಬಿಡಿಸಿ ಮೋಕ್ಷ ಮಾರ್ಗವನ್ನು ತೋರುವುದೇ ಇವರ ಆದ್ಯ ಕರ್ತವ್ಯವಾಗಿತ್ತು. ಅದುವೇ ನನ್ನ ಗುರುವಿನ ಸೇವೆಯೆಂದು ಭಾವಿಸಿದರು. ಹಾಗೆಯೇ ಹೇಳಿದಂತೆ ಮಾಡಿದ ಪುಣ್ಯಪುರುಷರಿವರು.

ಸನ್ಯಾಸವೆಂಬ ಅಭಯಾಸ್ತ್ರದೊಡನೆ ಲೋಕ ಸಂಚಾರ; ಭಿಕ್ಷಾಟನೆ, ಜ್ಞಾನ–ಅನ್ನ ದಾಸೋಹ; ಗುರುವಿನಿಂದ ಪಡೆದ ಆಧ್ಯಾತ್ಮ ವಿದ್ಯೆಯ ಪ್ರಸಾರ, ಕುಳ್ಳೂರು–ಇಂಚಲ ಮಠಗಳೆರಡರ ಆಗು–ಹೋಗುಗಳ ಜವಾಬ್ದಾರಿ, ಶ್ರೀ ಮಠಗಳಲ್ಲಿ ಜರುಗಿಸುವ ಅನ್ನದಾಸೋಹಕ್ಕೆಂದು ದವಸ–ಧಾನ್ಯ–ನಾಣ್ಯಗಳಸಂಗ್ರಹ-ಅನ್ನದಾಸೋಹಗಳ ಪ್ರಾರಂಭದ ಯೋಜನೆ, ಭಜನೆ, ಪ್ರವಚನ ಮುಂತಾದ ವಿಧಾಯಕ ಕಾರ್ಯಗಳನ್ನು ಶಿವಯೋಗೀಶ್ವರರು ಹಾಕಿದ ಪರಂಪರೆಯನ್ನು ಮುಂದುವರೆಸಿದರು. ಹೊಸಕೋಟೆ–ಕುಳ್ಳೂರು–ಇಂಚಲಗಳಲ್ಲಿ ವಿದ್ಯಾರ್ಥಿಗಳಿಗಾಗಿ ಉಚಿತ ಪ್ರಸಾದ ನಿಲಯ ಮತ್ತು ಪ್ರೌಢಶಾಲೆಗಳ ಪ್ರಾರಂಭ ಹೊಸಕೋಟೆಯಲ್ಲಿ ಈಗ ಅದು ಸಂಯುಕ್ತ ಪದವಿ ಪೂರ್ವ ಕಾಲೇಜಾಗಿ ಉನ್ನತ ದರ್ಜೆಗೇರಿದೆ. ಆಧ್ಯಾತ್ಮದ ಹಸಿವು ಹೆಚ್ಚಿದ್ದೇ ಜನರು ತಮ್ಮ ತಮ್ಮ ಗ್ರಾಮಗಳಿಗೆ ಪೂಜ್ಯ ರೇವಯ್ಯನವರನ್ನು ಬರಮಾಡಿಕೊಂಡು ಇವರಿಂದ ಕೃಪಾಶೀರ್ವಾದ ಪಡೆದು ಧನ್ಯರಾದವರು ಅದೆಷ್ಟೋ ಜನ.

ಕುಳ್ಳೂರು ಕಲ್ಮಠದಲ್ಲಿ ಭಜನೆ–ಪ್ರವಚನ–ಧ್ಯಾನ–ಯೋಗ ನಿತ್ಯ ನಡೆಯುತ್ತ ನಿತ್ಯದಾಸೋಹ ಅಂದಿನಿಂದಲೂ ನಡೆದುಕೊಂಡು ಬಂದಿದೆ. ೧೯೪೨ರಲ್ಲಿ ಶಿವಯೋಗೀಶ್ವರರ ಕರ್ತೃ ಗದ್ದುಗೆಯ ಸ್ಥಾಪನೆ ಅನ್ನಪೂರ್ಣೇಶ್ವರಿಯು ಶ್ರೀ ಮಠದಲ್ಲಿ ಯಾವತ್ತೂ ವಿಲಾಸಗೈಯುತ್ತಲಿದ್ದು, ಭಕ್ತರ ಅಪೇಕ್ಷೆಗಳನ್ನೀಡೇರಿಸುತ್ತಲಿರುವುದು. ಸದ್ಗುರುವಿನ ಗದ್ದುಗೆ ಪೂಜೆ, ವರುಷಕ್ಕೊಂದು ಮಹಾರಥೋತ್ಸವದಾಚರಣೆ, ಶ್ರಾವಣ ಮಾಸದಲ್ಲಿ ಪ್ರವಚನ–ಪೂಜೆ, ಪ್ರತಿ ಅಮವಾಸ್ಯೆಗೆ ಭಜನೆ ಮುಂತಾದ ಮಂಗಲಮಯ ಮಹೋತ್ಸವಗಳನ್ನು ಪ್ರಾರಂಭಿಸಿದ್ದಲ್ಲದೆ, ಅಂದು ಇಂದಿಗೂ ಮುಂದುವರೆದುಕೊಂಡು ಬಂದಿದೆ. ಶ್ರೀಮಠವು ಬಹು ಎತ್ತರದ ಕಲ್ಲು ಬಂಡೆಯ ಮೇಲಿದೆ ನಾವೆಲ್ಲರೂ ದೇವನಾಳುಗಳು, ಜಾತಿ–ವಿಜಾತಿಯೆನ್ನದಿರಿ, ದೇವನನ್ನೊಲಿಸಿಕೊಳ್ಳುವ ಆತುರದಲ್ಲಿರಿ, ಮೇಲು–ಕೀಳು ಎಂಬ ಭಾವಸಲ್ಲದು, ತಾರತಮ್ಯ ಭಾವನೆಗೆ ಆಸ್ಪದ ಕೊಡಬೇಡಿಯೆಂದು ಅವರು ಪದೇ ಪದೇ ಸಾರಿ ನಡೆಯುತ್ತಿದ್ದರು. ಅವರ ಆಧ್ಯಾತ್ಮಿಕ ಬಾಳ ಪುಟಗಳನ್ನು ಬಿಚುತ್ತ ಹೋದರೆ ಅವರು ತುಳಿದ ದಾರಿಯ ಪರಿಚಯವು ನಮಗಾಗುತ್ತದೆ.

"ಆಗಸದ ಎತ್ತರಕ್ಕೇರಿದ ಅವರು ಅರಿವಿನ ಮಹಾಮನೆಯಲ್ಲಿ ನಿಂತು ಗುರುವಾಣಿಯೆಂಬ

ಅನುಭವದ ಅಲೆಗಳನ್ನೆಬ್ಬಿಸುತ್ತ, ಆತ್ಮ-ಪರಮಾತ್ಮನ ನೆಲೆ-ಜೆಲೆಯನ್ನು ಭೋಧಿಸುತ್ತ ಆತ್ಮಗೀತೆಗಳನ್ನು ಹಾಡಿದ ಚೆಲ್ವಕೋಗಿಲೆಯಾಗಿದ್ದರು. ಇವರ ಆಗಮನದಿಂದ ನಾಡು ವಸಂತವನ್ನು ಕಂಡದ್ದು ಕಿಂಕರತ್ವದಿಂದ ಶಂಕರತ್ವಕ್ಕೇರಿದೆ"[೯]

ಶಾಂತಮೂರ್ತಿ, ಮುಗ್ಧ ಸ್ವಭಾವದ ರೇವಯ್ಯನವರು ಸಕಲರಿಂದಲೂ 'ವೈರಾಗ್ಯ ಚಕ್ರವರ್ತಿ' ಎಂದು ಕರೆಯಿಸಿಕೊಂಡು ಗೌರವ ಪಡೆದವರು. ಭಿಕ್ಷೆಯನ್ನು ಯಾರು ಎಷ್ಟೇ ಕೊಟ್ಟರೂ ಸ್ವೀಕರಿಸುತ್ತಿದ್ದರು. ಕಾವಿ ಬಣ್ಣದ ಕುದುರೆಯೇರಿ ಹೊರಟರೆ ಕುದುರೆಗೆ ಲಂಗು-ಲಗಾಮು ಇಲ್ಲದಿದ್ದರೂ ಅದು ತನ್ನಿಂದ ತಾನೆ ಎಲ್ಲಿ ನಿಲ್ಲುತ್ತದೆಯೋ ಅಲ್ಲಿ ಭಿಕ್ಷೆ ಪಡೆಯುತ್ತಿದ್ದರು. ಭಕ್ತರು ಹೆಚ್ಚಿನ ಪ್ರಮಾಣದಲ್ಲಿ ಭಿಕ್ಷೆ ನೀಡುತ್ತಿದ್ದರು. ಸಂತಸಪಡುತ್ತಿದ್ದರು. ಇಂದದು ತಿರುವು ಮುರುವಾಗಿದೆಯೆನ್ನಬೇಕು. ಕುದುರೆ ನೋಡಲು ಸಿಗುವುದಿಲ್ಲ. ಇಂದಿನ ಮಠಾಧೀಶರಿಗೆ ಕಾಂಟೇಶಕಾರು, ಹೆಲಿಕ್ಯಾಪ್ಟರುಗಳು ಬೇಕು; ಇಂತಿಷ್ಟೇ ಕೊಡಬೇಕೆಂಬ ಕಡ್ಡಾಯ ಬೇರೆ ಇದರಿಂದಾಗಿ ಮಠಗಳು ಅಲ್ಲಿರುವ ಘಟಕಗಳು ಬೆಳೆಯದಿರುತ್ತವೆಯೇ ಎಂದು ಚಿತ್ರಿಸಿದ್ದಾರೆ ಲೇಖಕ ಚಿಲಮಿ. ಭಿಕ್ಷೆ ಕಾಯಕ ಮಾಡುವಾಗ ನೂರಾರು ಪವಾಡಗಳನ್ನು ಬೀರಿದವರು ಸದ್ಗುರು ರೇವಯ್ಯನವರು, ಅವುಗಳನ್ನಿಲ್ಲಿ ಹೇಳುವುದಗತ್ಯವಿಲ್ಲವೆನಿಸುತ್ತದೆ. ಅಧ್ಯಾಯ ನಾಲ್ಕರ ಲೀಲಾವಿಭಾಗದಲ್ಲಿ ಗಮನಿಸಬಹುದು. (ಪುಟ ೨೯ ರಿಂದ ೪೫ರ ವರೆಗೆ)

'ರೇವಯ್ಯ ನರನಲ್ಲ ಹರನು' ಎಂಬ ವ್ಯಕ್ತಿ ಚಿತ್ರಣವನ್ನು ಲೇಖಕರು ಭಾಮಿನೀ ಷಟ್ಪದಿಯ ಪದ್ಯದಲ್ಲಿ ಹೀಗೆ ವರ್ಣಿಸಿದ್ದಾರೆ.

"ಬರಿಯ ಜೋಳಿಗೆಯಲಿ ಕೈ ಹಾಕಿ
ಬರುವ ಭಕ್ತರಿಗೀವ ಬೇಡಿದ್ದು
ಹರನ ಜೋಳಿಗೆಯಲ್ಲಿ ದೊರೆಯುವುದು ಸ್ಮರಿಸಿದಿಷ್ಟಾರ್ಥ
ಪರಿಚಯ ಪವಾಡದೋರುತ
ಪರಮಪರತರ ಪಾವನಾತ್ಮನು
ನರರ ಪೊರೆಯಲು ಬಂದ ಪರಮಾತ್ಮನವತಾರಿಗಳು"[೧೦]

ಬೇಡಿ ಬಂದ ಭಕ್ತರಿಗೆ ಅವರು ಬೇಡಿದ ಇಷ್ಟಾರ್ಥಗಳನ್ನು ಈಡೇರಿಸಿದ ಪವಾಡ ಪುರುಷರಾಗಿದ್ದರು. ಅಷ್ಟೇ ಅಲ್ಲ ಪರಮಾತ್ಮನ ಅವತಾರಿಗಳಾಗಿದ್ದರು ಎಂಬುದನ್ನು ಲೇಖಕರು ರೇಖಿಸಿರುವುದು ತಿಳಿದುಬರುತ್ತದೆ. ಇಂದಿನ ದಿನಮಾನಗಳಲ್ಲಿಯೂ ಇಂಥ ಪುಣ್ಯಪುರುಷರಿದ್ದಾರೆ. ಅವರನ್ನು ಕಾಣುವ, ಅವರು ಬೋಧಿಸುವ ತತ್ವಗಳನ್ನು ಕಾರ್ಯರೂಪಕ್ಕೆ ತರುವ ಇಚ್ಛಾಶಕ್ತಿ ಇಂದಿನ ಜನತೆಯಲ್ಲಿ ಕೊರತೆಯಿದೆಯೆಂದು ಚಿಲಮಿಯವರು ಮರುಗಿದ್ದಾರೆ. ಅವರು ಇಂಥ

ಪವಾಡಪುರುಷನ ಊರಿನಲ್ಲ ಜನಿಸಿದವರಾದುದರಿಂದ ಇಂತಹ ಪುಣ್ಯಪುರಷರ ಪ್ರಭಾವುಂಟಾಗಿ ಕಾಯಕಪ್ರಜ್ಞೆ, ಕಾಯಕನಿಷ್ಠೆ, ಸತ್ಯ, ಶಿಸ್ತು, ಪ್ರಾಮಾಣಿಕತೆ, ವಿನಯ, ಶ್ರದ್ಧೆ-ಭಕ್ತಿ, ತಿಳಿದುಕೊಳ್ಳಬೇಕೆಂಬ ಲವಲವಿಕೆ, ಆಧ್ಯಾತ್ಮದ ಕಡೆಗೆ ಹೆಚ್ಚಿನ ಗಮನ, ಅಧ್ಯಯನದ ಗೀಳು/ ಆಸಕ್ತಿ ಮುಂತಾದ ಗುಣಗಳು ಅವರಲ್ಲಿ ದ್ವಿಗುಣಗೊಂಡವು ಸಾಧುತ್ವದ ಲಕ್ಷಣಗಳು ಅವರಲಿ ಮಿಳಿತಗೊಂಡಿವೆಯೆಂದರೆ ತಪ್ಪೇನಲ್ಲ.

ರೇವಯ್ಯನವರು ವರುಣದೇವನನ್ನು ಭೂಲೋಕಕ್ಕೆ ಕೈ ಮಾಡಿ ಕರೆದದು ಗಂಗಾಳದಲ್ಲಿ ಕುದಿಯುತ್ತಲಿರುವ ಹುಗ್ಗಿಯನ್ನು ಕೈಯೆಂಬ ಸೌಟಿನಿಂದ ಭಕ್ತರಿಗೆ ಮತ್ತು ಗುರುವಿಗೆ ನೈವೇದ್ಯ ಮಾಡಿದ್ದು, ಕೆಟ್ಟು ನಿಂತ ವಾಹನ ಚಲಿಸುವಂತೆ ಮಾಡಿದ್ದು, ರೈತನೊಬ್ಬನ ಮನೆಗೆ ಬಂದ ಕಳ್ಳರು ಓಡಿ ಹೋದದ್ದು, ನಕಾತಿಯವರ ಮನೆಯಲ್ಲಿ ಅನ್ನಪೂರ್ಣೇಶ್ವರಿಯು ಕೃಪೆ ತೋರಿದುದು, ನದಿಗಳ ಮಹಾಪೂರಗಳಲ್ಲಿ ಭೂಮಿಯ ಮೇಲೆ ನಡೆದಂತೆ ನಡೆದುದು, ಬಸವಣ್ಣಿಯನ್ನು ಸಾವಿನಿಂದ ಪಾರುಮಾಡಿದ್ದು, ಆನದಿನ್ನಿ ಹನುಮಪ್ಪನ ಗಿಣ್ಣುರೋಗ ಸಂಹರಿಸಿದ್ದು, ಮತ್ತು ಸಂತಾನ ಸಂಪತ್ತು ನೀಡಿದ್ದು ಹೀಗೆ ಅಸಂಖ್ಯಾತ ಲೀಲೆಗಳನ್ನೆಸಗಿ ಭಕ್ತರುದ್ಧಾರಗೈದ ಪರಮಾತ್ಮನವತಾರಿ ಅವರಾಗಿದ್ದರು ಎಂಬುದನ್ನು ತುಂಬಾ ಸೊಗಸಾಗಿ ಚಿತ್ರಿಸುವಲ್ಲಿ ಲೇಖಕರ ನಿರೂಪಣಾ ಶೈಲಿ ತುಂಬ ಪರಿಣಾಮಕಾರಿಯಾಗಿದೆ.

ರೇವಯ್ಯನವರು ಕಾಯಕಯೋಗಿಗಳು; ತ್ರಿವಿಧ ದಾಸೋಹ ಮೂರ್ತಿ ಸೇವಾ ಭಾವನೆಯು ಇವರಲ್ಲಿ ಮನೆ ಮಾಡಿತ್ತು. ಅವರು ಜ್ಞಾನಿಗಳನ್ನಾಗಲಿ, ಮಹಾತ್ಮರನ್ನಾಗಲಿ ಕಂಡಾಗ ಅತೀ ವಿನಮ್ರತೆಯಿಂದ ವಂದಿಸಿ ಗೌರವ ಸಲ್ಲಿಸುವವರಾಗಿದ್ದರು ಅವರ ಭಕ್ತಿ- ಗುರುಭಕ್ತಿ ಅನುಸರಿಸಿದ ವಿರಕ್ತಿಯ ಮಾರ್ಗ ಭಕ್ತರಿಗೆ ನೀಡುವ ಹಿತೋಕ್ತಿ- ಈ ಮುಂತಾದವುಗಳನ್ನು ಲೇಖಕರು ಎಳೆಎಳೆಯಾಗಿ ಬಿಡಿಸಿಟ್ಟಿದ್ದಾರೆ. ಅವರ ಈ ಶೈಲಿ ಓದುಗರ ಗಮನ ಸೆಳೆಯುತ್ತದೆ.

ಶ್ರೀ ರೇವಯ್ಯನವರು ಪಂಚೀಕರಣ, ಅಡವೀಸಿದ್ಧೇಶ್ವರ ಸ್ತೋತ್ರ ದೇವಿ ಮಹಾತ್ಮೆಗಳಲ್ಲಿಯ ಜ್ಞಾನವನ್ನು ಸಂಪಾದಿಸಿಕೊಂಡ ಮಹಾನುಭಾವಿಗಳಾಗಿದ್ದರು. ಅಯಸ್ಕಾಂತದಂತಹ ವ್ಯಕ್ತಿತ್ವಕ್ಕೆ ಆಕರ್ಷಿತರಾದ ಭಕ್ತರೆಷ್ಟೋ ಅವರ ಆಶೀರ್ವಾದ ಅಥವಾ ಅನುಗ್ರಹದಿಂದ ಗುಣಹೊಂದಿ ಕರ್ಮ ಕ್ಷಯ ಹೊಂದಿದ ಜನರೆಷ್ಟೋ ಚಿಕ್ಕವರಿರುವಾಗಲೇ ಶ್ರೀ ಮಠಕ್ಕೆ ಬಂದ ರೇವಯ್ಯನವರು ೮೫ ವರ್ಷಗಳವರೆಗೂ ತಮ್ಮನ್ನು ತಾವು ಭಕ್ತರುದ್ಧಾರಕ್ಕಾಗಿ ಸವೆಯಿಸಿಕೊಂಡರು. ಮಠವನ್ನು ಊರ್ಜಿತಾವ್ಯವಸ್ಥೆಗೆ ತಂದರು. ಶಿವಯೋಗಿಗಳ ಕರ್ತೃ ಗದ್ದುಗೆ ನಿರ್ಮಿಸಿದರು. ಸೋಮಯ್ಯನವರ ಸಮಾಧಿ ಕಟ್ಟಿದರು. ಇವರೆಲ್ಲರ ಆರಾಧನೆ ಪುಣ್ಯ ತಿಥಿ ಆಚರಣೆ

ಮಾಡಿದರು. ಸತತವೂ ಸಪ್ತಾಹ ನಡೆಸಿದರು ಜನರ ಮನದಲ್ಲಿ ಭಕ್ತಿಯ ಮಹಾಪೂರವನ್ನೇ ಹರಿಸಿದ್ದು ಸಂಸ್ಮರಣೀಯವಾದುದು. ೧೯೨೪–೨೫ರ ಸುಮಾರಿಗೆ ಚುಳಕೆಪ್ಪನವರ ಅಂದರೆ ಸಿದ್ದರಾಮ ಶಿವಯೋಗಿಗಳು ಆಗಮಿಸಿದ್ದಾಗ ತಮ್ಮ ಪುಣ್ಯಪೀಠವನ್ನೇ ಅವರಿಗೆ ಬಿಟ್ಟು ಕೊಟ್ಟು; ಅವರು ನೆಲದ ಆಸನದಲ್ಲಿ ತಲ್ಲೀನರಾದರು. ಗಮನಿಸಿದರೆ ಅವರೊಬ್ಬ 'ಸಾಧು ಚಕ್ರವರ್ತಿ' ಸನ್ಯಾಸಿ–ಯೋಗಿ; ಅಪರೂಪದ ಮಹಾಯೋಗಿ, ಭವರೋಗ ನಿವಾರಕ ವೈದ್ಯರಾಗಿ, ಈ ಭೂಮಿಗೆ ಅವತರಿಸಿದ ಶಿವನ ಅವತಾರಿಯೇ ಅವರಾಗಿದ್ದರಂಬುದನ್ನು ಲೇಖಕರು ಬಹುವಾಗಿ ವರ್ಣಿಸಿರುವರು.

ಸಿದ್ದರಾಮೇಶ್ವರರಾಗಮನದಿಂದಾಗಿ ಎರಡೂ ಮಠಗಳ ಜವಾಬ್ದಾರಿ ರೇವಯ್ಯನವರಿಗೆ ಕಡಿಮೆಯಾಯಿತು. ವೃದ್ಧಾವಸ್ಥೆಯಾದರೂ ಸೇವಾನುರಾಗದ ಕೊರತೆಯಿರಲಿಲ್ಲ. ಸಿದ್ಧರಾಮೇಶ್ವರರು ಮತ್ತು ರೇವಯ್ಯನವರಿಬ್ಬರೂ ಕೂಡಿಕೊಂಡು ೨೭ ವರ್ಷಗಳವರೆಗೆ ಶ್ರೀಮಠಗಳ ಪ್ರತಿಯೊಂದು ಮಹೋತ್ಸವ–ಕಾರ್ಯಕ್ರಮಗಳನ್ನು ನಡೆಯಿಸಿಕೊಂಡು ಬಂದರು. ರೇವಯ್ಯನವರು ಲೋಕದ ಪಾಲಿಗೆ ದೂರವಾಗುವ ಲಕ್ಷಣಗಳು ಕಂಡುಬಂದವು, ಭಕ್ತರ ನಿಧಿ ಕಳಚುವಂತಾದುದು ದುರ್ದೈವ ಇಂಥ ಅಪರೂಪದ ಮಹಾತ್ಮನು ಐಕ್ಯನಾದ ಬಗೆಯನ್ನು ಕೆಳಗಿನ ಪದ್ಯದಲ್ಲಿ ಹೀಗೆ ನಿರೂಪಿಸಿದ್ದಾರೆ.

" ಅಂದು ಶ್ರೀ ಶಕೆ ಶಾಲಿವಾಹನ
ಮುಂದೆ ಹದಿನೆಂಟ್ನೂರದೆಪ್ಪತ್ತೇಳು
ಬಂದಧಿಕ ಮಾಸದಲಿ ಬಹುಳ ಚತುರ್ಥಿದಿನವೆಂದ್ರೆ
ಸದ ತಾರೀಖೈದು ಒಂಬತ್ತು
ಮುಂದೆ ಹತ್ತೊಂಭತ್ತೂರೈವತ್ತೈದು
ಇಂದು ರೇವಯ್ಯ ಸ್ವಾಮಿಗಳು ಲಿಂಗೈಕ್ಯರಾದದ್ದು"[೧೧]

ಅದು ಅಧಿಕ ಭಾದ್ರಪದ ಪಾಢ್ಯದ ದಿನದ ಮನ್ಮಥನಾಮ ಸಂವತ್ಸರ ಸೋಮವಾರ ಅಂದರೆ ಶಕೆ ೧೮೭೭ಸನ್ ೦೫–೦೯–೧೯೫೫ ರಂದು ಸೊಗಲದ ಶಿವನಲ್ಲಿ ಐಕ್ಯರಾದರೆಂಬುದನ್ನು ಹೇಳಿದ್ದಾರೆ. ಇವರ ಅಮೃತಮಯ ಬೆಳ್ಳಿಯ ಕವಚದೊಂದಿಗೆ ಸಿದ್ಧರಾಮೇಶ್ವರರು ರೇವಯ್ಯನವರ ಸಮಾಧಿ ಗದ್ದುಗೆಯನ್ನು ಶ್ರೀ ಶಿವಯೋಗೀಶ್ವರರ ಗದ್ದುಗೆಯ ಹತ್ತಿರವೇ ನಿರ್ಮಿಸಿ–ಸತತವೂ ಪೂಜಿಸುವಂತೆ ಅಣಿಗೊಳಿಸಿದರು. ಇಂಥ ಪುಣ್ಯಪುರುಷನ ಅಮರವಾಣಿಗಳು ಇಂದಿಗೂ ಹಿರಿಯಭಕ್ತರಲ್ಲಿ ಸದಾ ನೆನಪಾಗುತ್ತಲಿವೆ.

**ಉದಾಹರಣೆಗೆ** ರೇವಯ್ಯನವರ ವಾಣಿಗಳು ಹೀಗಿವೆ

೧ "ಸಾವಿರಾರು ದಗದ ಇದ್ದರೂ ಊಟಾ ಬಿಡಬಾರದು
ಕೋಟಿಗಟ್ಟಲೆ ದಗದ ಇದ್ದರೂ ಮಹಾತ್ಮರ ದರ್ಶನ ಬಿಡಬಾರದು!
೨ "ಪಾರಮಾರ್ಥಕ್ಕೆ ಪಂಚೀಕರಣ
ಪ್ರಪ್ರಂಚಕ್ಕೆ ಸುವರ್ಣ ಇವಿಷ್ಟು ಬೇಕು."
೩ "ಗಂಗಾ ಬೇಗನೇ ಮುಖ ತೋರವ್ವಾ"
೪ "ಪಂಚಾಳನ ಕೈ ಪಾವನಂತ
ಜಂಗಮನ ಪಾದ ಪಾವನಂತ
ಬ್ರಾಹ್ಮಣನ ವಾಣಿ ಪಾವನಂತೆ"[೧೨]

ಇಂಥ ವಾಣಿಗಳು ಶ್ರೀ ಗುರು ರೇವಯ್ಯನವರಿಂದ ಬಂದ ವಾಕ್ ಮಣಿಹಗಳಾಗಿವೆ. ಕೊನೆಯದಾದ ಎಂಟನೆಯ ಅಧ್ಯಾಯದಲ್ಲಿ ರೇವಯ್ಯನವರ ಸಮಕಾಲೀನ ಮಹಾತ್ಮರುಗಳಾದ ಹಾರೂಗೇರಿಯ ಚೆನ್ನವೃಷಭೇಂದ್ರ ಸ್ವಾಮಿಗಳು, ಮುನವಳ್ಳಿಯ ಭೂಮಿರಾಜ, ದಿಗಂಬರಪ್ಪಸ್ವಾಮಿಗಳು, ನಿರ್ವಾಣೆಪ್ಪನವರು ಮುಂತಾದವರ ಸಂಕ್ಷಿಪ್ತ ಪರಿಚಯವನ್ನೂ ಇವರೊಂದಿಗಿದ್ದ ಒಡನಾಟವನ್ನು ಲೇಖಕರು ಪ್ರಸ್ತಾಪಿಸಿದ್ದಾರೆ.

ಈ ಕೃತಿಯ ತುಂಬ ವಿಶಿಷ್ಟವಾಗಿ ಮೂಡಿ ಬಂದಿದೆ. ವಚನೋಕ್ತಿಗಳ ಬಳಕೆ, ಭಾಮಿನೀ ಪದ್ಯಗಳ ಸಮ್ಮಿಲನ, ರೇವಯ್ಯನವರ ವಾಕ್ ಮಣಿಹಗಳು ಇಂದಿಗೂ-ಎಂದೆಂದಿಗೂ ಅಮರವಾಣಿಗಳಾಗಿವೆ. ಈ ಮಹಾತ್ಮನ ಚರಿತ್ರೆ ಬರೆದ ಶೈಲಿಯು ಕರಿಮಣಿಸರದಲ್ಲಿ ಕೆಂಪು ಅಥವಾ ಬಿಳಿಯ ಹವಳವನ್ನು ಪೋಣಿಸಿದಂತೆ ಕಂಡುಬರುತ್ತದೆ. ಓದಿಸಿಕೊಂಡು ಹೋಗುವ ಆಕರ್ಷಕ ನಿರೂಪಣಾ ಶೈಲಿ ಲೇಖಕ ಚಲಮಿಯವರಿಗೆ ಸಿದ್ಧಿಸಿದೆ.

**೩. ಶ್ರೀ ಸದ್ಗುರು ಸಿದ್ಧರಾಮೇಶ್ವರ (ಚುಳಕೆಪ್ಪನವರ) ಶಿವಯೋಗಿಗಳ ಚರಿತ್ರೆ**

ಮೂರನೇಯ ಗ್ರಂಥ-ಶ್ರೀ ಸದ್ಗುರುಸಿದ್ಧರಾಮೇಶ್ವರ (ಚುಳಕೆಪ್ಪನವರ) ಶಿವಯೋಗಿಗಳ ಚರಿತ್ರೆ ಎಂಬುದಾಗಿದ್ದು; ಈ ಚರಿತ್ರೆಯ ನಾಯಕನು ಚುಳಕಿಗವಿಯಲ್ಲಿ ಅನುಷ್ಠಾನಗೈದು ಯೋಗಿಯಾದುದರಿಂದ ಈತನಿಗೆ ಚುಳಕೆಪ್ಪ! ಚುಳಕೆಪ್ಪನವರೆಂದು ಕರೆಯುವ ವಾಡಿಕೆಯಿದೆ. ಇವರ ಚರಿತ್ರೆಯು ಸುಮಾರು ೮೫ ಪುಟಗಳಲ್ಲಿ ಅಡಕಗೊಂಡಿದೆ. ಇದರಲ್ಲಿ ಒಟ್ಟು ಹತ್ತು ಅಧ್ಯಾಯಗಳಿವೆ. ಅವು ಇಂತಿವೆ.

೧. ಶ್ರೀ ಸದ್ಗುರು ಸಿದ್ಧರಾಮೇಶ್ವರರ ಜನನ-ಬಾಲ್ಯ
೨. ಶ್ರೀ ಸಿದ್ಧರಾಮೇಶ್ವರರು ಗೃಹವನ್ನು ತ್ಯಜಿಸಿದ್ದುದು
೩. ಚುಳುಕಿಯ ಶ್ರೀ ಸಿದ್ಧರ ಮಠದಲ್ಲಿ ಶ್ರೀ ಗುರು ಹೂಲಿಯ ಚರಮೂರ್ತಿಗಳ ಕೃಪೆಯಾದುದು.

೪. ಚುಳುಕಿಯ ಶ್ರೀ ಸಿದ್ಧರ ಮಠದ ವೈಶಿಷ್ಟ್ಯ
೫. ಶ್ರೀರೇವಯ್ಯ–ಸಿದ್ದರಾಮೇಶ್ವರರ ಶಿವಯೋಗಿಗಳ ಸಮಾಗಮ
೬. ಶ್ರೀಸಿದ್ಧರಾಮೇಶ್ವರ ಶಿವಯೋಗಿಯ ಸಿದ್ಧಿಯ ಹೆಗ್ಗುರುತುಗಳು
೭. ಶ್ರೀಸಿದ್ಧರಾಮೇಶ್ವರರು ಕೈಗೊಂಡ ಮಠಗಳ ಅಭಿವೃದ್ಧಿ ಯೋಜನೆಗಳು
೮. ಶ್ರೀಸಿದ್ಧರಾಮೇಶ್ವರರು ಬೀರಿದ ಅಮೃತ ವಾಣಿಗಳು
೯. ಶ್ರೀಸಿದ್ಧರಾಮ ಶಿವಯೋಗಿಗಳ ಐಕ್ಯಸ್ಥಲ
೧೦. ಶ್ರೀಮಠದ ಇತರ ಮಹಾತ್ಮರುಗಳು

ಹೀಗೆ ಹತ್ತು ನಿಟ್ಟಿನಲ್ಲಿ, ಮೂರನೆಯ ಪೀಠಾಧ್ಯಕ್ಷರಾದ ಶ್ರೀ ಸಿದ್ಧರಾಮಶಿವಯೋಗಿಗಳ ಚರಿತ್ರೆ ಅನಾವರಣಗೊಂಡಿದೆ. ಮಠದ ಸಂಪತ್ತೆಂದರೆ ಬಂಗಾರ–ಬೆಳ್ಳಿ–ಹೊಲಮನೆಯಲ್ಲ ಮಠ ಮಂದಿರಗಳಲ್ಲ; ಮಠದ ಸಂಪತ್ತೆಂದರೆ ಸಾಧಕರು, ಸಿದ್ಧರು, ವೈರಾಗಿಗಳು, ಮುಮುಕ್ಷುಗಳು, ಇವರು ಮೂರನೆಯ ಪೀಠಾಧಿಕಾರಿಯಾಗಿ ಮಠಗಳ ಏಳ್ಗೆಗೆ, ಸಮಾಜದುದ್ದಾರಕ್ಕೆ ಅಹ ಜಾಗ್ರತ ಅವಸ್ಥೆಯಲ್ಲಿದ್ದು ದುಡಿದ ಮಹನೀಯರು. ವಿವಿಧ ಹೊಸ ಮಠಗಳ ನಿರ್ಮಾಣ ಕಾರ್ಯ ಮತ್ತು ಜೀರ್ಣೋದ್ಧಾರ ಕೈಗೊಂಡವರು, ಕಿಂಕರತ್ವದಿಂದ, ಶಂಕರತ್ವಕ್ಕೇರಿದ ರೇವಯ್ಯನವರು ಸಾಧು ಸ್ವಭಾವದವರು ರೇವಯ್ಯನವರ ಹೆಗಲಿಗೆ ಹೆಗಲು ಕೊಟ್ಟು ಅಖಂಡ ೨೭ ವರ್ಷಗಳವರೆಗೂ ಸೇವಾನಿರತರಾದ ಮಹಾಪುರುಷರಿವರು. ಇವರು ದೇವಿ ಬಗಳಾಂಬೆಯನ್ನು ಒಲಿಸಿಕೊಂಡವರು. ಸಿದ್ಧರಾಮೇಶ್ವರರು ಯಾವ ಕಡೆಗೆ ಸಂಚರಿಸಿದರೂ ಬೆಂಬಿಡದ ತಾಯಿಯಾಗಿದ್ದಾಳೆ.

"ಮುಕ್ಕಣ್ಣನಂತೆ ಭೂಮಿಯ ಸಿರಿ ಸಂಪತ್ತನ್ನು ಮಿಗಿಲಾಗಿಸಿದ ಶ್ರೀಗಳು ಬಂಗಾರವನ್ನೇ ಬಗಿದು ಹಾಕುತ್ತೇನೆಂದು ಧ್ಯೇಯ, ಕೆಚ್ಚು ಅವರಲ್ಲಿತೆಂದು ಬೇರೆ ಹೇಳಬೇಕಾಗಿಲ್ಲ. ಇವರು ಸಿದ್ದಿ ಪುರುಷರೂ, ಅವತಾರಿಕರೂ ಆದುದರಿಂದ ವಿವಿಧ ಸತ್ಕಾರ್ಯಗಳನ್ನು ಜರುಗಿಸಿದ್ದಾರೆ. ಅವರು ದೈವೀ ಜೀವನದ ಬಟ್ಟೆ ತುಳಿದು ಸನ್ಮಾರ್ಗದತ್ತ ನಡೆಯುತ್ತಿರುವ ಶರಣಕುಲವನ್ನು ನಾವೀಗಲೂ ಪೀಠ–ಪ್ರಪೀಠ ಮಠಗಳಲ್ಲಿ ಕಾಣಬಹುದು. ನಡೆದುದೇ ಮಾರ್ಗವೆಂಬಂತೆ ಶಿವಯೋಗೀಶ್ವರರ ಮಾರ್ಗದರ್ಶನದನುಗುಣವಾಗಿ ಶ್ರೀ ರೇವಯ್ಯನವರ ಅನಂತರ ಅವತರಿಸಿದ ತ್ರಿನೇತ್ರಿ ಇವರು"[೧೩] ಎಂಬುದಾಗಿ ಚಿಲಮಿ ಅವರು ನಿರ್ಮಿಸಿದ್ದಾರೆ. ಭೂಲೋಕವನುದ್ಧರಿಸುವುದರ ಸಲುವಾಗಿ ಧಾರವಾಡ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಹೆಚ್ಚಾಳ ಗ್ರಾಮದ ಗದ್ದಗೀಮಠದ ಸಂಗಯ್ಯ ವೀರವ್ವನವರೆಂದ ಸ್ವಾತಿಕ ವೀರಶೈವ ದಂಪತಿಗಳ ಉದರದಿಂದ ಸನ್ ೧೯೦೧ ರಲ್ಲಿ ಪುನಃ ಅವತರಿಸಿ ಬಂದಿರುವರು ಎಂಬುದಾಗಿ ಲೇಖಕರು ಹೇಳಿರುವರು. ಇದು ಮಹಾತ್ಮರ ಚರಿತ್ರೆಗಳಲ್ಲಿಯೇ ವಿಶಿಷ್ಟವಾದುದೆಂದೆನಿಸುತ್ತದೆ.

ಇವರ ತಾಯಿಯ ತವರೂರು ಗುತ್ತಲ ಎಂಬ ಗ್ರಾಮ ತಾಯಿಯ ತವರೂರಿನವರದು ಶಿವಭಕ್ತರ ಮನೆತನ ಬರುವ ಹೋಗುವ ಭಕ್ತರಿಗೆ ಅನ್ನದಾಸೋಹದ ವ್ಯವಸ್ಥೆ ಮಾಡುತ್ತಿದ್ದರು. ಈ ಸಂಸ್ಕಾರವು ಎಳೆಯ ಮಗುವಾಗಿದ್ದ ಸಿದ್ಧರಾಮನ ಮೇಲೆ ಪರಿಣಾಮ ಬೀರಿರಲು ಸಾಕು, ಈತನನ್ನು ಶಾಲೆಗೆ ವಿದ್ಯೆ ಸಂಪಾದನೆಗೆಂದು ಕಳಿಸಿದರೆ ತನ್ನ ಜೊತೆಗಿನ ಬಾಲಕರೊಂದಿಗೆ ಮರಳ ಲಿಂಗವ ಮಾಡಿ ಪುಷ್ಪ-ಪಾತ್ರೆ ಏರಿಸಿ, ಪೂಜೆ-ಧ್ಯಾನಾಸಕ್ತನಾಗುತ್ತಿದ್ದನು. ಸಿದ್ಧರಾಮನ ಗಮನವೆಲ್ಲ ಶಾಲೆಯಲ್ಲಿರದೇ ಲಿಂಗದೇವನ ನೆನಕೆಯಲ್ಲಿರುತ್ತಿದನು. ವಿದ್ಯಾರ್ಥಿಯಾಗಿದ್ದಾಗಲೇ ಬಾಲಲೀಲೆಯನ್ನು ಎಸಗುತ್ತಿದ್ದನು. ಕೊನೆಗೆ ಗುರು, ತಂದೆ-ತಾಯಿ ಹಿರಿಯರಾರಿಗೂ ಹೇಳದೇ ಕೇಳದೆ ಮನೆಯನ್ನು ಬಿಟ್ಟು ಹೋದನು. ಆಗ ಆತನ ವಯಸ್ಸು ೧೪ ವರ್ಷಗಳು. ಹೆಬ್ಬಾಳದ ಪಕ್ಕದಲ್ಲಿರುವ ಫಕ್ಕೀರೇಶ್ವರ ಮಠ ಪ್ರವೇಶಿಸಿದ್ದುದನ್ನು ಕಂಡು ತಂದೆ-ತಾಯಿಗಳು ಸುರಕ್ಷಿತವಾಗಿದ್ದಾನೆಂದು ಸುಮ್ಮನಿದ್ದರು. ಶಿರಹಟ್ಟಿ ಮಠದ ಶ್ರೀಗಳ ಹೆಸರು ಸಿದ್ಧರಾಮೇಶ್ವರರೆಂಬುದಾಗಿತ್ತು, ಕೆಲವು ವರ್ಷಗಳು ಕಳೆದ ತರುವಾಯ ಮಗನನ್ನು ಕರೆದೊಯ್ಯಲು ಶಿರಹಟ್ಟಿ ಮಠಕ್ಕೆ ಬರುತ್ತಾರೆ. ನರಕಕ್ಕೊಯುತ್ತಾರೆಂಬ ಭೀತಿ ಆ ಬಾಲ್ಯಕನಲ್ಲಿ ಆವರಿಸಿತು. ಕೊನೆಗೆ ಶಿರಹಟ್ಟಿಯನ್ನೇ ತೊರೆಯುವ ನಿರ್ಧಾರ ಮಾಡಿ ಸಿದ್ಧರಾಮನು ಚುಳಕಿಯ ಗವಿಯಲ್ಲಿರುವ ಹೂಲಿಯ ಚರಮೂರ್ತಿಗಳ ಕಡೆಗೆ ಧಾವಿಸುತ್ತಾನೆ. ಅಲ್ಲಿಯ ಗುರುಕುಲಾಶ್ರಯದೊಂದಿಗೆ ಇದ್ದುಕೊಂಡು ಗದ್ದುಗೆ ಪಾದುಕೆಗಳ ಆರಾಧನೆಯನ್ನು ಮಾಡುತ್ತ, ಮಾಡುತ್ತ ಯೋಗಾಭ್ಯಾಸದಲ್ಲಿ ತೊಡಗುತ್ತಿದ್ದನು. ತಂದೆ ತಾಯಿಗಳು ಮದುವೆಯನ್ನು ಮಾಡಿ ಮನೆಯಲ್ಲಿರಿಸಿಕೊಂಡರಾಯಿತೆಂದು ಬಗೆದರೂ ಪ್ರಯೋಜನವಾಗಲಿಲ್ಲ. ಪಾಲಕರ ಕಡೆಗೆ ಓಗೊಡದೆ ಈ ಚರಮೂರ್ತಿಗಳೇ ನನಗೆ ತಂದೆ-ತಾಯಿ, ಬಂಧು-ಬಳಗ, ಸರ್ವವೂ ಆಗಿದ್ದಾರೆ ಎಂದು ಹೇಳಿ ಹೋಗಲಿಲ್ಲ. ಸಿದ್ಧರ ಗವಿಯಲ್ಲಿದ್ದುಕೊಂಡು ಯೋಗದ ಅನುಷ್ಠಾನದಲ್ಲಿ ತೊಡಗಿದ ಸಿದ್ಧರಾಮನು ಹಿಂಬರಿಕೆಯಿಂದ ಬಲು ಎತ್ತರವಾದ ಗೋಡೆ ಏರುವುದು; ೩೦-೪೦ ಅಡಿ ಎತ್ತರದ ಗೋಡೆಯೇರಿ ಅಲ್ಲಿಂದ ಜಿಗಿಯುವುದು; ಗೊಡಚಿಯ ವೀರಭದ್ರೇಶ್ವರ ದೇವಾಲಯದ ಕಳಸಗೋಪುರವನ್ನೇರಿ ಅಲ್ಲಿಂದ ವಾಪಸ್ಸು ಜಿಗಿದನೆಂಬ ಹೇಳಿಕೆಯನ್ನು ಲೇಖಕರು ಬಣ್ಣಿಸಿರುವರು. ಅಂದರೆ ಈತ ಕಾರಣಿಕ ಪುರುಷ ನಿರೂಪಮ, ಸಿದ್ದಾಟಿಕೆಯ ಸ್ವಭಾವದವನೆಂಬುದು ಇದರಿಂದ ವ್ಯಕ್ತವಾಗುತ್ತದೆ.

ಚುಳಕಿಯ ಶ್ರೀ ಗವಿಸಿದ್ಧರ ಮಠದ ವೈಶಿಷ್ಟ್ಯದ ವರ್ಣನೆಯ ಭಾಗ-ಅಧ್ಯಾಯ-ನಾಲ್ಕರಲ್ಲಿ ಬಹು ರಮ್ಯವಾಗಿ, ಸೊಗಸಾಗಿ ನಿರೂಪಿಸಿದ್ದುದನ್ನು ಕಾಣಬಹುದು. (ಪುಟ-೨೩ ರಿಂದ ೨೭ ರವರೆಗೆ) ಕಾಲ್ನಡಿಗೆಯ ಮೂಲಕ ಪ್ರಯಾಣಿಸುವಂತಹ ಕಾಲವದು. ಮಹಾತ್ಮರೂ ಲೋಕ ಸಂಚಾರವನ್ನು ಮಾಡುತ್ತಿದ್ದುದು ಸಹಜವೆನ್ನಿಸಿ. ಅಂದು ಸೊಗಲದೇವನ

ಜಾತ್ರೆ ಸುಪ್ರಸಿದ್ಧ, ಪ್ರತೀ ವರ್ಷವೂ ಆ ಜಾತ್ರೆಗೆ ಹೋಗಿ ಅನ್ನಸಂತರ್ಪಣೆಯನ್ನು ಅಂದಿನಿಂದ-ಇಂದಿನವರೆಗೂ ಮಾಡಿಸುತ್ತ ಬಂದಿರುವರು. ಶ್ರೀ ಶಿವಯೋಗೀಶ್ವರರ ವಾಣಿಯಂತೆ ದಕ್ಷಿಣಾ ಪಥದಿಂದ ಜಂಗಮ ಹುಡುಗನೊಬ್ಬ ಬರುತ್ತಾನೆ. ಆತ ಸೊಗಲದೇವನ ಜಾತ್ರೆಯಲ್ಲಿ ಸಂಧಿಸುತ್ತಾನೆ ಆ ಜಂಗಮನಿಂದಲೇ ನಿನ್ನ ಮತ್ತು ಮಠದ ಉನ್ನತಿಯಾಗುವುದೆಂದು ರೇವಯ್ಯನವರಿಗೆ ಶಿವಯೋಗಿಗಳು ಐಕ್ಯರಾಗುವ ಮುನ್ನ ಹೇಳಿದ್ದರು. ಆ ಕುರುಹುಗಳು ರೇವಯ್ಯ-ಸಿದ್ಧರಾಮರ ಸಮಾಗಮದಲ್ಲಿ ಗೋಚರವಾದವು. ಮಾರನೇ ವರುಷವೂ ಇಬ್ಬರೂ ಸಂಧಿಸಿದರು. ಕುಳ್ಳೂರು ಕಲ್ಮಠಕ್ಕೆ ಬನ್ನಿರೆಂದು ರೇವಯ್ಯನವರು ಭಿನ್ನವಿಸಿಕೊಂಡರು. ಆಗಲೂ ಬಂದಿರಲಿಲ್ಲ. ಪ್ರತಿ ವರ್ಷವೂ ಕುಳ್ಳೂರು ಕಲ್ಮಠದ ಸಪ್ತಾಹ ಆಚರಿಸುತ್ತಲಿದ್ದರು. ೧೯೨೭ರ ಸಪ್ತಾಹದಾಚರಣೆಗೆಂದು ಶ್ರೀ ಸಿದ್ಧರಾಮರು ಬಂದರು-ಕುಳ್ಳೂರು ಕಲ್ಮಠದಲ್ಲಿಯೇ ಉಳಿದರು ಅಂದಿನಿಂದ ಸುಮಾರು ೨೭ ವರ್ಷಗಳ ಕಾಲ ಇವರಿಬ್ಬರ ಜೋಡಿಯಲ್ಲಿ ಮಠದ ಕಾರ್ಯಕಲಾಪಗಳು ಸಾಂಗವಾಗಿ ಜರುಗುತ್ತವೆ. ತಮ್ಮ ಪೀಠವನ್ನು ಸಿದ್ಧರಾಮರಿಗೆ ಬಿಟ್ಟುಕೊಟ್ಟ ರೇವಯ್ಯನವರು ಸಾಧುಗಳಾಗಿಯೇ ಮುಂದುವರಿಯುತ್ತಾರೆ.

ರೇವಯ್ಯನವರ ಐಕ್ಯದ ಸುದ್ದಿಯನ್ನು ಕೇಳಿದ ಜನ ಇಂಚಲ ಚುಳಕಿ-ನೇಸರಗಿ-ಮಲ್ಲಾಪುರ, ಯಡಹಳ್ಳಿ, ಇಂಗಳಗಿ, ಬೂದಿಹಾಳ, ಬೂದನೂರ-ಕುಳ್ಳೂರಿನ ಸುತ್ತಮುತ್ತಲಿನ ಗ್ರಾಮದ ಭಕ್ತರು ಸಮಾವೇಶಗೊಂಡರು, ಬ್ರಹ್ಮಜ್ಞಾನ ಸಂಪಾದಿಸಿಕೊಂಡ ಸಿದ್ಧರಾಮೇಶ್ವರರಿಗೆ ೧೯೫೫ ರಂದು ಭಕ್ತರೊಂದಿಗೆ ವಿವಿಧ ಮಹಾತ್ಮರು ಆಗಮಿಸಿ ಶ್ರೀ ಚುಳಕೆಪ್ಪನವರಿಗೆ ಕಿರೀಟ ತೊಡಸಿ ಪಟ್ಟಾಧಿಕಾರಿಗಳೆಂದು ಘೋಷಿಸಿದರು. ಅಂದಿನಿಂದ ಸಿದ್ಧರಾಮ ಶಿವಯೋಗಿಗಳಿಗೆ ಇಂಚಲ ಕುಳ್ಳೂರ ಮಠಗಳ ಜವಾಬ್ದಾರಿ ಹೆಚ್ಚುತ್ತದೆ.

ಸಿದ್ಧರಾಮೇಶ್ವರರು ಲೀಲಾಪುರುಷರೆಂಬುದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದು. ಚುಳಕಿಯಲ್ಲಿ ವರುಣದೇವನ ಕೃಪೆ ಮಾಡಿದ್ದುದು. ಅಲಕುಂದಿ ಮಠದಲ್ಲಿ ಮೇಘರಾಜನನ್ನು ತಡೆಹಿಡಿದದ್ದು, ದುರ್ಗಾಷ್ಟಮಿಯ ದಿನದಂದು ದೇವಿ ಬಗಳಾಂಬೆಯು ಸರ್ಪವಾಗಿ ಬಂದುದು, ದೇವನಾಳ ಗ್ರಾಮದಲ್ಲಿ ತಾವಿರುವ ಸ್ಥಳದಲ್ಲಿ ಅನ್ನ-ಪ್ರಸಾದದ ದಾಸೋಹ ನಡೆದಾಗ ಮಳೆಯನ್ನು ತಡೆಹಿಡಿದುದು; ಕೆಟ್ಟು ನಿಂತ ವಾಹನ ಶ್ರೀಯವರ ಪಾದಸ್ಪರ್ಶದಿಂದ ಚಲಿಸಿದ್ದು, ಸಂತಾನ ಭಾಗ್ಯ ಬೇಡಿ ಬಂದವರಿಗೆ ಫಲ ನೀಡಿ ಆಶೀರ್ವದಿಸಿದ್ದು; ಫಿರುಗಿಯ ದೇವಾಲಯದಲ್ಲಿರುವ ಭದ್ರವಾದ ಕೀಲಿಯು ಥಳಕ್ಕನೆ ಇವರ ಹಸ್ತಸ್ಪರ್ಶದಿಂದ ಬಿಚ್ಚಿದ್ದು: ಹೀಗೆ ಅಸಂಖ್ಯಾತ ಪವಾಡಗಳನ್ನು ಬೀರಿದ ಬಗೆಯನ್ನು ಲೇಖಕರು ನಿರೂಪಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಏಳನೆಯ ಅಧ್ಯಾಯದಲ್ಲಿ ಸಿದ್ಧರಾಮ ಶಿವಯೋಗಿಗಳು ಚುಳಕಿ ಗಪಿಸಿದ್ಧರ ಮಠದ ಜೀರ್ಣೋದ್ಧಾರ ಕೈಗೊಂಡರು. ನೇಸರಗಿ ಮಲ್ಲಾಪುರದಲ್ಲೊಂದು ಮಠವನ್ನು ಕಟ್ಟಿಸಿದರು. ರೇವಯ್ಯನವರ ಗದ್ದುಗೆ ಕಟ್ಟಿಸಿದರು, ಕಾದರೊಳ್ಳಿ ಮಠ ಮತ್ತು ಬೈಲಹೊಂಗಲದ ನಿರ್ವಾಣೇಪ್ಪನವರ ಮಠ, ಭೂಮಿರಾಜರ ಮಠ, ಯಡಹಳ್ಳಿಯ ಅಜಾತಲಿಂಗಜ್ಜನ ಮಠ ನಿರ್ಮಿಸಿದರು. ಯಡೊಳ್ಳಿಯ ಹತ್ತಿರವಿರುವ ಅನದಿನ್ನಿಯಲ್ಲಿ ಮತ್ತು ದೇವನಾಳದಲ್ಲಿ ೧೦೧ ಪತ್ರಿಮರಗಳನ್ನು ಹಚ್ಚಿ ಬೆಳೆಯಿಸಿದರು. ಹೀಗೆ ಸಣ್ಣ-ದೊಡ್ಡ ಊರುಗಳಲ್ಲಿ ಮಠಗಳನ್ನು ಕಟ್ಟಿಸಿ, ಪಾದುಕೆಗಳನ್ನು ಪ್ರತಿಷ್ಠಾಪಿಸಿದ್ದರು. ಆ ಸ್ಥಳಗಳು ಭಕ್ತರ ಅಪೇಕ್ಷೆ, ಈಡೇರಿಸುವ ಪವಿತ್ರ ಸ್ಥಳಗಳಾಗಿ ಈಗಲೂ ಐತಿಹ್ಯಗಳಾಗಿ ಉಳಿದಿವೆ. ದೇವಿ ಬಗಳಾಂಬೆಯ ಉಪಾಸನೆ ಮಾಡುತ್ತ ಶ್ರೀಗಳು ೨೮-೧೧-೧೯೭೫ ರ ದಶಮಿಯ ದಿನದಂದು ಐಕ್ಯಸ್ಥಲವನ್ನೇರಿದರು. ಇವರ ಐಕ್ಯದ ನಂತರ ಇಂಚಲ ಮಠಕ್ಕೆ ಶ್ರೀ ಶಿವಾನಂದ ಭಾರತೀಯವರು ಪೀಠಾಧಿಪತಿಗಳಾದರು. ಕುಳ್ಳೂರು ಕಲ್ಮಠದ ಪೀಠಾಧ್ಯಕ್ಷರಾಗಿ ಶ್ರೀ ಶಿವಯ್ಯ ಮಹಾಸ್ವಾಮಿಗಳು ಆಸೀನರಾದರು.

ಚಿಲಮಿ ಅವರು ರಚಿಸಿದ ಈ ಮೂರು ಚರಿತಾರ್ಹ ಮಹಾಪುರುಷರ ಚರಿತ್ರೆ ಸದ್ಭಕ್ತರ ಹಾಗೂ ಸ್ಥಳೀಯ ಪರಿಸರದ ಅನ್ಯ ಜನಸಮುದಾಯಗಳ ಮೇಲೂ ಸದ್ಭಕ್ತಿ ಹಾಗೂ ಆದರ್ಶ ಜೀವನದ ಪ್ರಭಾವವನ್ನು ಬೀರಿವೆ. ಒಬ್ಬರಿಗಿಂತ ಮತ್ತೊಬ್ಬ ಮಹಾಪುರುಷರು ಉಪಮಾತೀತರು-ವರ್ಣಿಸಲು ಸಾಧ್ಯವೇ ಇಲ್ಲವೆನ್ನುವಷ್ಟರ ಮಟ್ಟಿಗೆ ಚಿಲಮಿಯವರು ಅರ್ಥಗರ್ಭಿತವಾಗಿ ಚಿತ್ರಿಸಲು ಮುಂದಾಗಿದ್ದಾರೆ. "ಜೀವನ ಚರಿತ್ರೆಯಲ್ಲಿ ಸತ್ಯಾಂಶಕ್ಕೆ ಮಾತ್ರ ಸ್ಥಾನ, ಕಲ್ಪನಾಂಶಕ್ಕೆ ಕಿಂಚಿತ್ತೂ ಎಡೆಯಿಲ್ಲ. ಚರಿತ್ರೆಯಂತೆ ಜೀವನ ಚರಿತ್ರೆಯೂ ಸತ್ಯ ಸಂಗತಿಗಳ ಪ್ರಾಮಾಣಿಕವಾದ ದಾಖಲೆ, ವಸ್ತುನಿಷ್ಠೆ ಅದರ ಪ್ರಮುಖ ಲಕ್ಷಣ ಸಮಗ್ರತೆ ಅದರ ಇನ್ನೊಂದು ಮುಖ್ಯ ಲಕ್ಷಣ"[೧೪] ನಾಯಕನ ಜನನ ಮರಣದವರೆಗಿನ ಜೀವನದ ಎಲ್ಲಾ ಹಂತಗಳ, ಎಲ್ಲ ಮುಖಗಳ ಸಾಧನೆ ಸಿದ್ಧಿಗಳ ವಿವರ ಪೂರ್ಣವಾದ, ಕಾಲಾನುಕ್ರಮವಾದ, ನಿರೂಪಣೆ ಜೀವನ ಚರಿತ್ರೆಗಳಲ್ಲಿರುತ್ತದೆ. ಚಿಲಮಿ ಅವರು ರಚಿಸಿದ ಜೀವನ ಚರಿತ್ರೆಗಳಲ್ಲಿ ಈ ಲಕ್ಷಣಗಳು ಸಮಗ್ರವಾಗಿ ಕಂಡು ಬರುವುದಿಲ್ಲ ಆದರೂ ಸಮಕಾಲೀನ ಪುರಾಣ ಕೃತಿ ರಚನೆಗೆ ಚಿಲಮಿಯನ್ನು ಕೃತಿಗಳು ಉತ್ತಮ ಪ್ರೇರಣೆಯನ್ನು ನೀಡುತ್ತವೆ.

## ಅಡಿ ಟಿಪ್ಪಣಿಗಳ

೧. ಕನ್ನಡ ವಿಶ್ವಕೋಶ, ಸಂ-೮, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಪುಟ ಸಂಖ್ಯೆ-೧೮೦, ೧೯೭೫.

೨. ಮಾಸ್ತಿಯವರ ವಿಮರ್ಶೆ ಒಂದು ಅಧ್ಯಯನ, ಡಾ. ಜಿ. ಎಂ. ಹೆಗಡೆ, ಪುಟ ಸಂಖ್ಯೆ-೧೯೭

೩. ಶ್ರೀ ಶಿವಯೋಗೀಶ್ವರ ಚರಿತ್ರೆ, ಡಾ. ಆರ್. ಬಿ. ಚಿಲಮಿ, ಪುಟ ಸಂಖ್ಯೆ-೩೩

೪. ಅದೇ ಪುಟ-೫೪

೫. ಅದೇ ಪುಟ-೫೫

೬. ಶ್ರೀ ರೇವಯ್ಯ ಮಹಾಸ್ವಾಮಿಗಳ ಚರಿತ್ರೆ, ಡಾ. ಆರ್. ಬಿ. ಚಿಲಮಿ, ಪುಟ ಸಂಖ್ಯೆ-೪

೭. ಅದೇ ಪುಟ-೫

೮. ಅದೇ ಪುಟ-೧೦

೯. ಅದೇ ಪುಟ-೨೬

೧೦. ಅದೇ ಪುಟ-೨೯

೧೧. ಅದೇ ಪುಟ-೫೮

೧೨. ಅದೇ ಪುಟ-೬೦

೧೩. ಶ್ರೀ ಸಿದ್ಧರಾಮೇಶ್ವರ ಚರಿತ್ರೆ, ಡಾ. ಆರ್. ಬಿ. ಚಿಲಮಿ, ಪುಟ ಸಂಖ್ಯೆ-೧

೧೪. ಕನ್ನಡ ವಿಶ್ವಕೋಶ ಸಂ-೮, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ ಸಂಖ್ಯೆ- ೧೮೧, ೧೯೭೫

## ಅಧ್ಯಾಯ-ಆರು

# ಆರ್.ಬಿ.ಚಿಲಮಿ ಅವರ ಕಾವ್ಯ : ಒಂದು ವಿವೇಚನೆ

ಸಾಹಿತ್ಯ ಪರಂಪರೆ ಪ್ರಧಾನವಾಗಿ ಕಾವ್ಯ ಪರಂಪರೆ. ಅಂದರೆ ಕಾವ್ಯಕ್ಕೆ ವಿಶೇಷ ಮನ್ನಣೆಯನ್ನು ನೀಡಿದ ಪರಂಪರೆ. ಹೀಗಾಗಿ ಕಾವ್ಯ ಪ್ರಯೋಗಗಳ ಶ್ರಮ ಈ ಪರಂಪರೆಗೆ ಮಹತ್ವವಾದದು. ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಗದ್ಯವು ವಿಶೇಷವಾಗಿ ಬೆಳೆದಿದ್ದರೂ ಕಾವ್ಯವನ್ನೇ ಸಾಹಿತ್ಯಕ ಚರ್ಚೆಗಳು ಆಧರಿಸಿವೆ. ಪ್ರಗತಿಶೀಲವೊಂದನ್ನು ಹೊರತುಪಡಿಸಿ ಉಳಿದೆಲ್ಲ ಪ್ರಸ್ಥಾನಗಳು ರೂಪಿಸಿದ್ದು ಕಾವ್ಯ ಮಾದರಿಗಳನ್ನೇ. "ಕಳೆದ ಶತಮಾನದಲ್ಲಿ ಹೆಚ್ಚು ಕಡಿಮೆ ೨೦-೨೫ವರ್ಷಗಳ ಅಂತರದಲ್ಲಿ ವಿಭಿನ್ನ ಪ್ರಣಾಳಿಕೆಗಳನ್ನು ಕಾವ್ಯ ಪ್ರಯೋಗ ಪ್ರಕ್ರಿಯೆಯು ಹೊರಡಿಸುತ್ತಾ ಬಂದಿದೆ. ಈ ದೃಷ್ಟಿಯಿಂದ ನೋಡಿದರೆ ತೊಂಭತ್ತರ ದಶಕದಲ್ಲಿ ವಿಶೇಷವಾದ ಕಾವ್ಯ ಪ್ರಣಾಳಿಕೆಯೊಂದು ಹೊರಟಿಲ್ಲ. ಕನ್ನಡ ಕಾವ್ಯ ಪರಂಪರೆಯ ಶ್ರದ್ಧೆ ದೊಡ್ಡದು. ಕವಿತೆ ಎಂಬುದು ಕಡಲಿನಂತೆ. ಆದರೆ ಅತಿಥಿಗಳಿಗೆ ಮುಗಿವಿಲ್ಲ ನಿಜ ಆದರೂ ಅದು ಜೀವನದ ಹಲವಾರು ಅಗ್ನಿ ದಿವ್ಯಗಳ ಮುಖಾಮುಖಿಯಲ್ಲಿ ಕೇವಲ ಮಾತಾಗಿ ಬಿಡುತ್ತದೆ."[೧] ಈ ನಿಟ್ಟಿನಲ್ಲಿ ಆಲೋಚಿಸಿದಾಗ ಆರ್.ಬಿ.ಚಿಲಮಿಯವರ ಕವಿತೆಗಳು ಯಾವ ಪಂಥಕ್ಕೂ ಸೇರದೆ, ತನ್ನದೇ ಆದ ನೆಲೆಯಲ್ಲಿ ಸಾಮಾಜಿಕ ಕಳಕಳಿಯನ್ನು ಹೊತ್ತು ಮೈದಳೆದಿವೆ. ಇವರ ಕವಿತೆಗಳನ್ನು ಓದಿದಾಗ, ಇವುಗಳಲ್ಲಿ ಕಾವ್ಯದ ಲಯ ಗೌಣವಾಗಿ ಗದ್ಯದಂತೆ ತೋರಿದರೂ, ಸಾಮಾಜಿಕ ಕಳಕಳಿಯು ಅವರ ಕವಿತೆಗಲ್ಲಿ ಎದ್ದು ಕಾಣುತ್ತದೆ.

'ಬತ್ತೀಸರಾಗ ನುಡಿಸಯ್ಯ' ಎಂಬ ಬಸವಣ್ಣನವರ ವಚನವೊಂದರ ನುಡಿಯನ್ನು ಹೊತ್ತಿರುವ ಈ ಕವನ ಸಂಕಲನವು ೩೨ ಕವನಗಳನ್ನೊಳಗೊಂಡಿದೆ. ಶ್ರೀಯುತರ ಕವಿತೆಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಕೆಳಕಂಡಂತೆ ವಿಭಾಗಿಸಿಕೊಳ್ಳಲಾಗಿದೆ.

೧. ಪ್ರಕೃತಿ ಚಿತ್ರಣ

೨. ಸಾಮಾಜಿಕ ಚಿತ್ರಣ

೩. ವ್ಯಕ್ತಿ ಚಿತ್ರಣ

೪. ಧಾರ್ಮಿಕ ನೇತಾರರು

೫. ಅಂತರಂಗ ವಿವೇಚನೆ

**೧. ಪ್ರಕೃತಿ ಚಿತ್ರಣ**

ಕವಿ ಚಿಲಮಿ ಅವರು ತಮ್ಮ ಕವನಗಳಲ್ಲಿ ತಾವು ನೋಡಿದ ಪರಿಸರವನ್ನು ಆ ಪರಿಸರದಿಂದ ಪಡೆದ ಆಹ್ಲಾದವನ್ನು ಕುರಿತು ಸೊಗಸಾಗಿ ಚಿತ್ರಿಸಿದ್ದಾರೆ. ಪ್ರಕೃತಿಯಲ್ಲಾದ ಬದಲಾವಣೆಗಳನ್ನು ಕಂಡು ಆಶ್ಚರ್ಯ ಚಕಿತರಾಗಿದ್ದಾರೆ.

"ಸೊರಗಿದ ಗಿಡಗಳನ್ನು ಚಿಗುರಿಸುವ ಋತುರಾಜ
ಹೊಸರಥ ಸೃಷ್ಟಿಗೆ ಪುಷ್ಠಿ ನೀಡುವ ಪೃಥ್ವಿರಾಜ"[೨]

ಎಂದು 'ಋತುರಾಜ ವಸಂತ' ಎಂಬ ಕವನದಲ್ಲಿ ವಸಂತ ಋತುವಿನ ಆಗಮನ, ಅದು ಪ್ರಕೃತಿಯಲ್ಲಿ ಮೂಡಿಸಿದ ಬದಲಾವಣೆ ಕುರಿತು ಆನಂದ ತುಂದಿಲತರಾಗುತ್ತಾರೆ. ವಸಂತಋತುವಿನ ಆಗಮನದ ಪೂರ್ವದಲ್ಲಿ ಪ್ರಕೃತಿಯಲ್ಲಿನ ಮರ ಗಿಡ ಬಳ್ಳಿಗಳ ಎಲೆಗಳು ಉದುರಿ ಸೌಂದರ್ಯ ಹೀನವಾಗಿರುತ್ತವೆ. ವಸಂತ ಋತು ಆಗಮಿಸುತ್ತಲೇ ಪ್ರಕೃತಿ ಹೊಸ ರೂಪ ತಾಳಿ ಹಚ್ಚಹಸುರಾಗಿ ಎಲ್ಲರ ಗಮನವನ್ನು ತನ್ನತ್ತ ಸೆಳೆದುಕೊಳ್ಳುತ್ತದೆ. ಇದನ್ನು ಗಮನಿಸಿದ ಕವಿ ಚಿಲಮಿಯವರು ಇದೇ ಕವನದಲ್ಲಿ ವಸಂತ ಋತುವಿನ ಮಹಿಮೆಯನ್ನು ಹೀಗೆ ಹೇಳುತ್ತಾರೆ.

"ಮಾವು ಬೇವು ತರುಗಳ ಚಿಗುರೊಡೆದು
ಭೂಮಿಗಳೆಲ್ಲವನ್ನು ಹಸನುಗೊಳಿಸುವ ಶೃಂಗಾರರಸ"[೩]

ಮಾವು, ಬೇವು ಮುಂತಾದ ಮರಗಿಡಗಳು ಚಿಗುರೊಡೆದು ಪ್ರಕೃತಿಯನ್ನು ಸುಂದರವಾಗಿಸುತ್ತವೆ. ಇದನ್ನು ನೋಡುವವರಿಗೆ ರಸದೌತಣ ನೀಡುತ್ತದೆ ಎಂದು ಕವಿ ಹೇಳುತ್ತಾರೆ. ಈ ಸಂದರ್ಭದಲ್ಲಿ ಮಾವಿನ ಚಿಗುರನ್ನು ತಿಂದು, ಮೃದು ಕಂಠದಿಂದ ಬಾಯ್ದೆರೆದು ಕೋಗಿಲೆ ಮಧುರವಾಗಿ ಹಾಡುತ್ತದೆ. ಹಾಗೆಯೇ ಜೇನು ನೊಣಗಳ ಹಿಂಡು ಇದೇ ಸಂದರ್ಭದಲ್ಲಿ ಹೂವಿನಲ್ಲಿರುವ ಮಧುವನ್ನು ಹೀರುವ ಕ್ರಮ, ಮನುಷ್ಯನ ಮನಸ್ಸಿಗೆ ಆನಂದ ನೀಡುವ ಜೆಯ್... ಜೆಯ್...' ಎಂಬ ನಾದ ಹೊರಹೊಮ್ಮುವಂತೆ ಮಾಡುವುದು ಈ ವಸಂತ ಋತುವಿನ ವೈಶಿಷ್ಟ್ಯ. ಹಾಗೆಯೇ ಪ್ರಕೃತಿಯಲ್ಲಿ ಯಾವ ಯಾವ ಬದಲಾವಣೆಗಳಾಗುತ್ತವೆ, ಪ್ರಕೃತಿ ನಿಶಬ್ದದಿಂದ ಶಬ್ದದೆಡೆಗೆ ಹೇಗೆ ತಿರುಗುತ್ತದೆ, ಅದು

ಸಮಗ್ರವಾಗಿ ಯಾವ ರೀತಿ ಬದಲಾವಣೆಗೆ ನಾಂದಿಹಾಡುತ್ತದೆ, ಎಂದು ಕವಿ ಈ ಕವನದಲ್ಲಿ ವಿವರಿಸಿದ್ದಾರೆ. ಅಲ್ಲದೆ ವಸಂತ ಮಾಸಕ್ಕೆ "ಮಧುಮಾಸ, ಶೃಂಗಾರ ಮಾಸ, ಕುಸುಮ ಮಾಸ" ಎಂದು ಹೆಸರುಗಳಿರುವುದನ್ನು ಜ್ಞಾಪಿಸಿಕೊಳ್ಳುತ್ತಾರೆ.

ಕವಿಯು 'ಮಾಮರ' ಎಂಬ ಕವನದಲ್ಲಿ ಮಾವಿನ ಮರಕ್ಕೂ ಕೋಗಿಲೆಗೂ ಇರುವ ಸಂಬಂಧವನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ.

"ತಳಿರು ತಿಂದು ದನಿಯನು ಹದಗೊಳಿಸಿ
ಕುಹೂ ಕುಹೂ ಎಂದು ಕೂಜನಗೈಯವ
ಗಾನಕೋಗಿಲೆಗೆ ಆಶಾದಾಯನೀತನಲ್ಲವೆ?"[೪]

ಕೋಗಿಲೆಯು ಮಾವಿನ ಮರವು ಬಿಟ್ಟ ಸೊಗಸಾದ ಚಿಗುರನ್ನು ತಿಂದು ತನ್ನ ಕಂಠ ಹದಗೊಳಿಸಿಕೊಂಡು ಕೂಗುವ ಬಗೆಯನ್ನು ವಿವರಿಸುತ್ತಾರೆ. ಅಲ್ಲದೆ,

"ಹೂ-ಕಾಯಿ ಹಣ್ಣು ನೀಡಿ ಹೃದಯಕ್ಕೆ
ತಣಿರಸವ ನೀಡುವ ಮನೋಲ್ಲಾಸದ ನಿಧಿಯೇ"[೫]

ಎಂದು ಮಾವಿನ ಮರ ಮನುಷ್ಯನಿಗೆ ನೀಡುವ ರುಚಿಯಾದ ಹಣ್ಣುಗಳು. ಅವುಗಳನ್ನು ತಿಂದ ಮನುಷ್ಯನಿಗೆ ಆಗುವ ಆನಂದವನ್ನು ಕುರಿತು ವಿವರಿಸುತ್ತಾ ಮಾವಿನ ಮರವನ್ನು ಮನೋಲ್ಲಾಸದ ನಿಧಿಯೇ ಎಂದು ಕರೆಯುತ್ತಾರೆ. ಚಿಗುರೊಡೆದ ಮಾವಿನ ಮರ ನೋಡಲು ಅಂದ ಚಂದವಾಗಿರುತ್ತದೆ. ಮನಕ್ಕೆ ಆನಂದವನ್ನು ಸಹ ಕೊಡುತ್ತದೆ. ಹಾಗೆಯೇ ಅದರ ಹಣ್ಣು ನೋಡಲು ಅಂದ ಚಂದ ಮನಕ್ಕೆ ಆನಂದ, ಹಾಗೆಯೇ ಅದರ ಹಣ್ಣು ತುಂಬಾ ರುಚಿಕರವಾಗಿರುತ್ತದೆ. ಇದರಿಂದ ಮಾನವ ಆನಂದವನ್ನು ಅನುಭವಿಸುತ್ತ ಉಲ್ಲಾಸಭರಿತನಾಗುತ್ತಾನೆ. ಆದ್ದರಿಂದ ಕವಿ ಮನೋಲ್ಲಾಸದ ನಿಧಿಯೇ ಎಂದು ಮಾವಿನ ಮರವನ್ನು ಕರೆದಿರುವುದು ಔಚಿತ್ಯ ಪೂರ್ಣವೆನಿಸುತ್ತದೆ. ಮಾವಿನ ಮರದ ಎಲೆಗಳು ಮದುವೆ, ಪೂಜೆ ಉತ್ಸವ ಮುಂತಾದ ಶುಭಕಾರ್ಯಗಳಲ್ಲಿ ಬಳಕೆಯಾಗಿ ಶೋಭೆಯನ್ನುಂಟು ಮಾಡುತ್ತವೆ. ಇದರ ಕಾಯಿ ಗರ್ಭಿಣಿ ಸ್ತ್ರೀಯರ ಬಯಕೆಯನ್ನು ಈಡೇರಿಸುವಲ್ಲಿ ಸಾಫಲ್ಯತೆಯನ್ನು ಪಡೆಯುತ್ತದೆ. ಅನೇಕ ರೀತಿಯಲ್ಲಿ ಮಾವಿನ ಮರದ ಎಲೆ, ಕಾಯಿ, ಹಣ್ಣು ಮಾನವನ ಬಯಕೆಗಳನ್ನು ಈಡೇರಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಆದರೆ ಮಾನವನಿಗೆ ಪರೋಪಕಾರ ಗುಣ ಇಲ್ಲ ಎಂಬುದರ ಬಗ್ಗೆ ಕವಿ ಕಳವಳ ವ್ಯಕ್ತಪಡಿಸುತ್ತಾರೆ.

**೨. ಸಾಮಾಜಿಕ ಚಿತ್ರಣ**

ಪ್ರತಿಯೊಬ್ಬ ಕವಿಯು ತಾನು ಹುಟ್ಟಿಬೆಳೆದ ಬದುಕಿನ ಪರಿಸರವನ್ನು ತಮ್ಮ ಸಾಹಿತ್ಯದಲ್ಲಿ ಪ್ರತಿಬಿಂಬಿಸುವುದು ಹಿಂದಿನಿಂದಲೂ ನಡೆದು ಬಂದಿದೆ. ತನ್ನ ಪರಿಸರ ಗಿಡ,

ಬೆಟ್ಟ, ಕಾಡು, ನದಿ, ಪ್ರಕೃತಿ ಮುಂತಾದವುಗಳಿಂದ ಪಡೆದ ಆನಂದವನ್ನು ಮತ್ತು ತನ್ನ ಪರಿಸರದ ಜನರೊಂದಿಗಿನ ಸಹಕಾರ ಮುಂತಾದ ಅಂಶಗಳನ್ನು ತಮ್ಮ ಕಾವ್ಯಕ್ಕೆ ವಸ್ತುವನ್ನಾಗಿಸಿ ಕಾವ್ಯ ರಚಿಸುವುದು ವಾಡಿಕೆ. ಇದಕ್ಕೆ ಕವಿ ಚಿಲಮಿಯವರು ಹೊರತಾಗಿಲ್ಲ. ತಾವು ಬದುಕಿನಲ್ಲಿ ಪಟ್ಟ ಯಾತನೆ ಹಾಗೂ ಸಂತಸಗಳನ್ನು ತಮ್ಮ ಕವನದಲ್ಲಿ ಯಥಾವತ್ತಾಗಿ ಚಿತ್ರಿಸಿದ್ದಾರೆ. ಮಾನವ ಸ್ವಭಾವವನ್ನು ಕುರಿತು ಕವಿ

"ಬಯಕೆಯ ಬಳಕೆಯಲಿ ಮುಳುಗೇಳುತ್ತ
ಸ್ವಾರ್ಥಿಯಾಗಿ ಜೀವಿಸುತ್ತಿರುವಾಗ
ಸತ್ಯ ಪಥವು ದೊರಕಿತೆ?
ಉಳಿಕೆ-ಗಳಿಕೆಗಳ ತೂಕದಲಿ"[೬]

ಮನುಷ್ಯನಿಗೆ ಇರುವ ಬಯಕೆಗಳು ಅದರ ವಿಸ್ತಾರ, ಒಂದು ಬಯಕೆ ಈಡೇರಿಸಿಕೊಳ್ಳಲು ಮತ್ತೊಂದು ಬಯಕೆ ಸೃಷ್ಟಿಯಾಗುತ್ತದೆ. ಈ ಬಯಕೆಗಳನ್ನು ಪೂರೈಸಿಕೊಳ್ಳಲು ಆತ ವ್ಯರ್ಥ ಪ್ರಯತ್ನಪಡುವ, ತನ್ನ ಬಯಕೆ ಈಡೇರಿಕೆಗಾಗಿ ಸ್ವಾರ್ಥಿಯಾಗಲು ಬಯಸುತ್ತಾನೆ. ಇಂತಹ ಸ್ವಾರ್ಥಮಯವಾದ ಜೀವನ ಸಾಗಿಸುತ್ತಿರುವಾಗ ಬಯಕೆ ಈಡೇರಿಕೆಗಾಗಿ ಸತ್ಯದಾರಿಯನ್ನು ಬಿಟ್ಟು ವಾಮಮಾರ್ಗದಲ್ಲಿ ಹಣ ಗಳಿಕೆಗೆ ತೊಡಗುತ್ತಾನೆ ಎಂದು ಕವಿ ವ್ಯಥೆಪಡುತ್ತಾರೆ.

ಹಾಗೆಯೇ ಕವಿ ಮುಂದುವರೆದು 'ಪ್ರಾಮಾಣಿಕ' ಕವನದಲ್ಲಿ ಪ್ರಾಮಾಣಿಕತೆ ತನ್ನ ಮೌಲ್ಯವನ್ನು ಕಳೆದುಕೊಂಡು ಅಪ್ರಾಮಾಣಿಕತೆ ತಾಂಡವನೃತ್ಯವಾಡುತ್ತಿರುವುದನ್ನು ಕಂಡು ಕವಿ ಚಿಲಮಿಯವರು ಸಿಡಿಮಿಡಿಗೊಳ್ಳುತ್ತಾರೆ.

"ದಾಯಾದಿ ಸಂಬಂಧದೀ ಮಾನವ
ರಕ್ತಪಾತದ ಕಾಲುವೆಯ ಹರಿಸುತಾ"[೭]

ಎಂದು ಒಡಹುಟ್ಟಿದವರು ತಮ್ಮ ಸಂಬಂಧವನ್ನು ಬಿಟ್ಟು ಆಸ್ತಿ ಎಂಬ ಸಣ್ಣ ಕಾರಣಕ್ಕಾಗಿ ಹೊಡೆದಾಡಿ ರಕ್ತದ ಕೋಡಿಯನ್ನು ಹರಿಸಿ ಕೋರ್ಟ್ ಮೆಟ್ಟಿಲೇರಿ ತಾನೆ ಗೆಲ್ಲಬೇಕೆಂದು ಅನೇಕ ಅಕ್ರಮ ಸಾಕ್ಷಿಗಳನ್ನು ಸೃಷ್ಟಿಸಿ,

"ಸತ್ಯದಾ ಹೊರತು ಮತ್ತೇನನ್ನೂ ನುಡಿಯಲಾರೆವೆಂದು"[೮]

ಸತ್ಯ ನುಡಿಯುತ್ತೇವೆಂದು ಲಕ್ಷಾಂತರ ಹಣ ಸುರಿಯಿಸಿ ನ್ಯಾಯವನ್ನು ಕೊಂಡುಕೊಳ್ಳುವುದನ್ನು ಕಂಡು ಕವಿ ಬೇಸರಪಟ್ಟುಕೊಳ್ಳುತ್ತಾರೆ.

ಇದೇ ಕವನದಲ್ಲಿ ಅವರು ಮುಂದುವರಿದು ಧರ್ಮದ ಹೆಸರಿನಲ್ಲಿ ಮಠಗಳನ್ನು ಸ್ಥಾಪಿಸಿ ಸನ್ಯಾಸಿ ವೇಷವನ್ನು ಧರಿಸಿ. ಧರ್ಮದ ಹೆಸರಿನಲ್ಲಿ ವ್ಯಭಿಚಾರ ಮಾಡುವ ಮಠಾಧೀಶರನ್ನು ಕಂಡು ಕಿಡಿಕಾರುತ್ತಾರೆ.

"ಧರ್ಮ ಸಂಸ್ಥಾಪನಾಕರ್ಮದಲ್ಲಿ ತೊಡಗಿ
ಸನ್ಯಾಸಿ ವೇಷ ಧರಿಸಿ, ಮಠ ಮಂದಿರಗಳ
ನಿರ್ಮಿಸಿ ಗಾಂಜಾ ವಿಜ್ಜಿತ ಮಜಾಮಾಡುವ"[೯]

ಹೀಗೆ ಧರ್ಮದ ಹೆಸರಿನಲ್ಲಿ ಕಾವಿಧರಿಸಿ ಮಠ ಪೀಠಗಳನ್ನು ಕಟ್ಟಿಸಿ ಧರ್ಮ ಪ್ರಚಾರದ ಸೋಗನ್ನು ಹಾಕುತ್ತ ಮುಗ್ಧ ಜನರನ್ನು ಶೋಷಣೆಗೆ ಒಳಪಡಿಸಿ ನಾನಾ ರೀತಿಯಲ್ಲಿ ಮಜಾ ಮಾಡುತ್ತ ಕಾಲ ತಳ್ಳುತ್ತಿರುವ ಕೆಲ ಕಪಟ ಸನ್ಯಾಸಿಗಳನ್ನು ಕಂಡು ಚಿಲಮಿಯವರು ಕೋಪಗೊಳ್ಳುತ್ತಾರೆ. ಅವರು ಮುಂದುವರಿದು ಇಂಥ ಸನ್ಯಾಸಿಗಳಿಂದ ಸಮಾಜದಲ್ಲಿ ಸಮಾನತೆಯನ್ನು ಪ್ರತಿಪಾದಿಸಿ ದೀನದಲಿತರ ಉದ್ಧಾರಕ್ಕಾಗಿ ತಮ್ಮ ಇಡೀ ಬದುಕನ್ನು ಅರ್ಪಿಸಿಕೊಂಡಿರುವ ಮಹಾತ್ಮರಿಗೆ ಕೆಟ್ಟ ಹೆಸರು ಬರುತ್ತದೆ ಎಂದು ಚಿಲಮಿಯವರು ಆತಂಕ ಪಡುತ್ತಾರೆ. ಇದೇ ಕವನದಲ್ಲಿ ಚಿಲಮಿಯವರು ಪ್ರಸಕ್ತ ಸಂದರ್ಭದಲ್ಲಿ ರೈತರ ಸ್ಥಿತಿಗತಿ ಕುರಿತು ಸರಕಾರ ತಾಳಿರುವ ನಿಲುವನ್ನು ನೋಡಿ ಅಸಹ್ಯ ಪಟ್ಟು ಖಂಡಿಸುತ್ತಾರೆ.

'ಲೋಕೋಭಿನ್ನರುಚಿಹಿಃ' ಎನ್ನುವ ಕವನದಲ್ಲಿ ಚಿಲಮಿಯವರು
ಇಂದಿನ ಮನುಷ್ಯನ ಮನಃಸ್ಥಿತಿ ಕುರಿತು ಖೇದ ವ್ಯಕ್ತಪಡಿಸುತ್ತಾರೆ.

"ಸಾಮಾನ್ಯನ ಗಮನ ಮೃಷ್ಟಾನ್ನದೆಡೆಗೆ
ಬಲ್ಲವರ ಗಮನ ತತ್ವಾನ್ವೇಷಣೆಯೆಡೆಗೆ
ರಾಜಕಾರಣಿಗಳ ಗಮನ ನಿಯಮೋಲ್ಲಂಘನದೆಡೆಗೆ
ಕವಿ ಸಾಹಿತಿಗಳ ಗಮನ ಕಾವ್ಯ ರಚನೆಯಡೆಗೆ
ಭ್ರಮರಂಗೆ ಬಂಡುಂಬುವ ಚಿಂತೆ
ತರುಣ ತರುಣಿಯರಿಗೆ ಸಮ್ಮಿಲನದ ಚಿಂತೆ
ವರ್ತಕನಿಗೆ ಹಣ ಸಂಗ್ರಹದ ಚಿಂತೆ
ಜೂಜುಗಾರನಿಗೆ ಜೂಜಾಟದ ಚಿಂತೆ"[೧೦]

ಕವಿ ಚಿಲಮಿ ಈ ಕವನದಲ್ಲಿ ಸಾಮಾನ್ಯ, ಜ್ಞಾನಿ, ರಾಜಕಾರಣಿ, ಸಾಹಿತಿ, ವರ್ತಕ, ತರುಣ, ತರುಣಿ ಮುಂತಾದವರ ಮನಃಸ್ಥಿತಿ, ಅವರರವರ ಅಭಿರುಚಿಗೆ ತಕ್ಕಂತೆ ಮತ್ತು ಅವರ ಆಸಕ್ತಿ ಕ್ಷೇತ್ರದ ಕಡೆ ಇದ್ದರೂ, ಈ ಎಲ್ಲರ ಮನಸ್ಸು ಒಂದೇ ತೆರನಾಗಿರುವುದಿಲ್ಲ. ಒಂದೇ ತೆರನಾಗಿ ಆಲೋಚಿಸುವುದಿಲ್ಲವೆನ್ನುವ ವಿಭಿನ್ನ ನೆಲೆಗಟ್ಟಿನ ಮೇಲೆ ಕಾರ್ಯ ನಿರತವಾಗಿರುತ್ತದೆ ಎಂಬುದನ್ನು ಸೂಚ್ಯವಾಗಿ ಹೇಳುತ್ತಾರೆ.

'ಕಾಂಚಾಣಂ ಕಾರ್ಯಸಿದ್ಧಿಹಿಃ' ಎಂಬ ಕವನದಲ್ಲಿ ಕವಿ ಚಿಲಮಿ ಅವರು ಸಾಮಾಜಿಕ ವ್ಯವಸ್ಥೆಯಲ್ಲಿ ಹಣದ ಪ್ರಭಾವ, ಹಣದ ಮಹತ್ವ, ಹಣಗಳಿಕೆ ಮತ್ತು ಉಳಿತಾಯ ಮಾರ್ಗ ಮುಂತಾದ ಅಂಶಗಳನ್ನು ತುಂಬ ವಸ್ತುನಿಷ್ಠವಾಗಿ ಚಿತ್ರಿಸಿದ್ದಾರೆ.

"ಹಣವೆಂದಾಕ್ಷಣವೇ ಹೆಣವು ಬಾಯ್ದೆರೆದು ನಿಲ್ಲುವಾಗ
ಜೀವಂತ ಹೆಣ ಸುಮ್ಮನೆ ಇದ್ದೀತೆ?
ಲೋಕದೊಳು ಹಣದ ಸಲುವಾಗಿಯೇ ಹಣಾಹಣಿ
ಕೋರ್ಟಿನಲ್ಲಿ ನ್ಯಾಯ ದೊರಕಿಸಿಕೊಡುವುದು ಹಣವೇ
ಕಛೇರಿಗಳಲ್ಲೂ ಕಾಂಚಾಣಂ ಕಾರ್ಯ ಸಿದ್ದಿ ಅಲ್ಲವೇ?
ರಾಜಕಾರಣಿಗಳನ್ನು ಬಲಿಷ್ಠರನ್ನಾಗಿಸುವುದೂ ಹಣವೇ"[೧೧]

'ಹಣ ಎಂದರೆ ಹೆಣವು ಬಾಯಿ ತೆರೆಯುತ್ತದೆ' ಎಂಬ ಗಾದೆಯನ್ನು ಅವಲೋಕಿಸಿದಾಗ ಹಣದ ಮಹತ್ವ ಏನೆಂದು ಅರಿಯಬಹುದು. ನಮ್ಮೆಲ್ಲಾ ಆಸೆ ಆಕಾಂಕ್ಷೆಗಳಿಗೆ ಹಣವೇ ಪ್ರಧಾನವಾಗಿದೆ. 'ಹಣ ಇಲ್ಲದವನ ಬಾಳು ಹೆಣಕ್ಕಿಂತ ಕೀಳು' ಎಂಬಂತೆ ಪ್ರತಿ ಹಂತದಲ್ಲೂ ಪ್ರತಿ ಕ್ಷೇತ್ರದಲ್ಲೂ ನಮ್ಮ ಗುರಿ ಈಡೇರಿಕೆಗಾಗಿ ಹಣ ಪ್ರಮುಖ ಪಾತ್ರ ವಹಿಸುತ್ತದೆ. ಈ ಹಿನ್ನೆಲೆಯಲ್ಲಿ ಕವಿ ಚಿಲಮಿ ಅವರು ಲೋಕದಲ್ಲಿ ನಡೆಯುವ ಎಲ್ಲಾ ವ್ಯವಹಾರಗಳು, ಯುದ್ಧಗಳು ನಡೆಯುವುದು ಹಣದ ಸಂಪತ್ತನ್ನು ಹೆಚ್ಚಿಸಿಕೊಳ್ಳಲು. ಕೋರ್ಟಿನಲ್ಲಿ ಜಯಗಳಿಸಬೇಕಾದರೆ ಹಣ ವ್ಯಯಿಸಲೇಬೇಕು. ಅಲ್ಲದೆ ರಾಜಕಾರಣಿಗಳು ರಾಜಕಾರಣಿಗಳಾಗಿ ಉಳಿಯಲು ಹಣವೇ ಪ್ರಧಾನ ಹಾಗೇ ಮುಂದುವರಿದು ಕವಿ

"ಬಂಧು ಬಳಗದವರನ್ನು ಮರುಳಗೊಳಿಸಿ ಕೇಡೆಸಗುವುದಿದುವೇ
ಹಣದ ಗುಲಾಮರಾಗದ ಮಹಾನುಭಾವರಿಲ್ಲವೇ ಇಲ್ಲವಲ್ಲ"[೧೨]

ವ್ಯಕ್ತಿ ವ್ಯಕ್ತಿಗಳ ಮಧ್ಯೆ ಮಧುರ ಬಾಂಧವ್ಯ, ಸ್ನೇಹ ಪಾರಮ್ಯ, ಮನಸು ಮನಸ್ಸುಗಳ ನಡುವೆ ಪ್ರೀತಿ, ವಿಶ್ವಾಸ, ವೈರತ್ವ, ಅಸೂಯೆ, ಮತ್ಸರ, ಕ್ರೋಧ ಮೊದಲಾದವುಗಳನ್ನು ಸೃಷ್ಟಿಸುವುದು ಹಣವೇ. ಅಲ್ಲದೆ ಬಂಧುಗಳನ್ನು ಕೂಡಿಸುವುದು ಮತ್ತು ಬೇರ್ಪಡಿಸುವುದು ಹಣವೇ ಹಣಕ್ಕೆ ಗುಲಾಮರಾಗದವರು ಯಾರೂ ಇಲ್ಲ ಎನ್ನುತ್ತಾರೆ ಕವಿ.

"ದೇವರ ದುರುಶನಕ್ಕಂತೂ ಮೊದಲು ಬೇಕು ಝಣ-ಝಣ
ಇಲ್ಲವಾದರೆ ಪೂಜಾರಿಯ ಸೇವೆ ಬಣ-ಬಣ"[೧೩]

ಪ್ರಸಕ್ತ ಸಂದರ್ಭದಲ್ಲಿ ದೇವಸ್ಥಾನಗಳಲ್ಲಿ ದೇವರ ದರ್ಶನ ಮಾಡಬೇಕಾದರೆ ಪೂಜಾರಿಗೆ ಕಾಣಿಕೆ ರೂಪದಲ್ಲಿ ಹಣ ಕೊಡಬೇಕು ಇದಿಲ್ಲದೆ ದೇವರ ದರ್ಶನವಾಗುವುದೇ ಇಲ್ಲ. ಮಠ ಮಂದಿರದಲ್ಲಿರುವ ಮಹಾನುಭಾವರನ್ನು ಹಣ ಭರತ ನಾಟ್ಯ ಮಾಡಿಸುತ್ತದೆಂದು, ಭರತನಾಟ್ಯ ಮಾಡಿಸುವುದರ ಕುರಿತು ಕವಿ ವ್ಯಂಗ್ಯ ಮಾಡುತ್ತಾರೆ.

'ಪುಢಾರಿ' ಎಂಬ ಕವನದಲ್ಲಿ ಸಾಮಾಜಿಕ ವ್ಯವಸ್ಥೆಯ ವೈಪರೀತ್ಯವನ್ನು ಕುರಿತು ಹೀಗೆ ಹೇಳುತ್ತಾರೆ.

"ಮಳೆಯಾಗೋದ ಒಂದ ತಡ ಮೋಳೆಯೊಡೆದು
ಎತ್ತರೆತ್ತರ ಬೆಳೆದು ಹಸಿರು ಗಿಡದಾಗ ಮೊಸರ ಚಲ್ಲಿದ್ವಾಂಗ
ಬಿಳಿ ಹೂವಿನ ಗೊಂಚಲಗಳನ್ನು ಸುರಿಸಿ ಹಬ್ಬಿದರ
ಸೃಷ್ಟಿಯ ಸೌಂದರ್ಯ ಮಿತಿನಯಿಲ್ಲ, ಅಷ್ಟಲ್ಲದ
ಯಾವ ಬೇಳೀನೂ ಬೆಳೀಲಿಕ್ಕೂ ಆಸ್ಪದ ಕೊಡುದಿಲ್ಲ!
ಸಸಿ ದೊಡ್ಡದಾಗೂದ್ರಾಗ ಹಸನಾಗಸ್ತೀನಿ ಅಂದ್ರ
ಒಕ್ಕಲಿಗನನ್ನ ನರ್ವಸ್ ಮಾಡಿ ಬಿಡತ್ಯೆತಿ
ಉತ್ತು ಬಿತ್ತಂವ ಅಂತಾನ ಕರಿಕಿ ಜೇಕ
ಉರಮಲಿ ಇನ್ನುಳಿದ ಕಸಗಳಿಗಿಂತಲೂ ಈ
ಮಥಾರಿ ಕಸದ್ದ ಭಾಳ ಕಾಟಾಗ್ಯೆತಿ ಅಂತ"[೧೪]

ಬ್ರಿಟೀಷರು ತಂದ ಪಾರ್ಥೇನಿಯಂ ಸಸ್ಯವು, ಇಂದು ಆಹಾರ ಧಾನ್ಯವನ್ನು ಬೆಳೆಯಲು ಜಾಗವಿಲ್ಲದಷ್ಟು ವ್ಯಾಪಕವಾಗಿ ಬೆಳೆದಿದೆ. ತನ್ನ ಜೊತೆ ಹುಟ್ಟಿದ ಯಾವುದೇ ಸಸ್ಯವನ್ನು ಇದು ಬೆಳೆಯಲು ಬಿಡುವುದಿಲ್ಲ. ಇದನ್ನು ಉದಾಹರಣೆಯನ್ನಾಗಿಟ್ಟುಕೊಂಡು ಕವಿ ಚಿಲಮಿ ಆರೋಗ್ಯಕರವಾದ ಸಾಮಾಜಿಕ ವ್ಯವಸ್ಥೆಯನ್ನು ಕಲುಶಿತಗೊಳಿಸುವ ದುಷ್ಟ ಮನಸ್ಕರರಿಗೆ ಹೋಲಿಸಿ ಬರೆದಿದ್ದಾರೆ. ಸಾಮಾಜಿಕ ವ್ಯವಸ್ಥೆಯಲ್ಲಿ ಸ್ಥಾನಮಾನ ಗಿಟ್ಟಿಸಲು ದುಷ್ಟ ಜನರು ಕೊಲೆ, ಸುಲಿಗೆ, ದರೋಡೆ, ಅತ್ಯಾಚಾರ, ಅಪಹರಣ ಮುಂತಾದ ಕೃತ್ಯಗಳನ್ನು ಎಸಗುತ್ತಾರೆ. ಸಮಾಜದ ಸ್ವಾಸ್ಥ್ಯವನ್ನು ಹದಗೆಡಿಸಿ ತಮ್ಮ ಕಾರ್ಯ ಸಾಧನೆಗಾಗಿ ಮುಗ್ಧರನ್ನು ಬಲಿಕೊಟ್ಟು ಒಳ್ಳೆಯವರನ್ನು ಬೆಳಯಗೊಡದೆ ಇಡೀ ವ್ಯವಸ್ಥೆಯನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಪ್ರಯತ್ನ ಪಡುತ್ತಾರೆ. ಅಂಥವರನ್ನು ಈ ಪಾರ್ಥೇನಿಯಂ ಸಸ್ಯಕ್ಕೆ ಹೋಲಿಸಿ ಇಂದಿನ ಸಾಮಾಜಿಕ ವ್ಯವಸ್ಥೆಯನ್ನು ವಿಡಂಬಿಸುತ್ತಾರೆ. ಅಂತೆಯೇ ಕವನದ ಕೊನೆಯಲ್ಲಿ "ಇದರ ಜಾತಿ ಜನಾನು ಭಾಳ ಆಗ್ಯೆತಿ"[೧೫] ಎಂದು ನಿಟ್ಟುಸಿರು ಬಿಡುತ್ತಾರೆ.

**೩. ವ್ಯಕ್ತಿ ಚಿತ್ರಣ**

ವ್ಯಕ್ತಿ ಬದುಕಿನ ವಿವಿಧ ಮಗ್ಗಲುಗಳನ್ನು, ಕಾರ್ಯ ಸಾಧನೆಯ ಮಜಲುಗಳನ್ನು, ಬದುಕಿನ ಸ್ಫೂರ್ತಿದಾಯಕ ಘಟನೆಗಳನ್ನು ವ್ಯಕ್ತಿತ್ವದ ಸ್ವರೂಪ ಮತ್ತು ಮಹತ್ವಗಳನ್ನು ಕುರಿತು ಅಧ್ಯಯನ ಮಾಡಿ ವಿಶ್ಲೇಷಿಸಿ ವಿವೇಚಿಸುವುದು ವ್ಯಕ್ತಿ ಚಿತ್ರಣವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಚಿಲುಮಿಯವರು ತಮ್ಮ 'ಬತ್ತಿಸರಾಗ' ಕವನ ಸಂಕಲನದಲ್ಲಿ ಕೆಲವು ಪ್ರಸಿದ್ದ ವ್ಯಕ್ತಿಗಳ ಕುರಿತು ಕವನ ಬರೆದಿದ್ದಾರೆ. ಕನ್ನಡದ ನಿಘಂಟುತಜ್ಞ, ಸಂಶೋಧಕ ಜೆ.ಎಫ್.ಕಿಟೆಲರನ್ನು ಕುರಿತು 'ಕಿಟೆಲರ ನೆನದು'ಎಂಬ ಕವನದಲ್ಲಿ

"ಅನುದಿನವೂ ಚಿಂತನ ಮಂಥನಗಳ ಸಂಶೋಧನಗಳ
ಜಾಲದಲ್ಲಿ ಸಿಲುಕಿದ ಅನುಭಾವಿ ರತ್ನ ಶಿಖಾಮಣಿಯಾಗಿ
ಕಲ್ಮಷ ಸಾಹಿತ್ಯವನ್ನು ಬದಿಗೊತ್ತಿದ ಹಂಸಪಕ್ಷಿಯಾಗಿ
ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿರುವ
ಕನ್ನಡಾಂಬೆಯ ವರ ಪುತ್ರರೆಂದೆನಿಸಿಕೊಂಡಿರಿ ನೀವು"[೧೬]

ಕನ್ನಡದ ಉದ್ದಾಮ ಪಂಡಿತರಾದ ಡಾ.ಕಿಟೆಲ್ ಜನಿಸಿದ್ದು ಜರ್ಮನಿಯಲ್ಲಿ. ಕರ್ನಾಟಕಕ್ಕೆ ಅವರು ಬಂದದ್ದು ಧರ್ಮ ಪ್ರಸಾರಕ್ಕಾಗಿ ಮಾಡಿದ್ದು ಕನ್ನಡ ಸೇವೆ ಎಂಬ ಸಾಮಾನ್ಯ ವಿವರಣೆಯೊಂದಿಗೆ ಕವನ ಆರಂಭವಾಗುತ್ತದೆ. ಅವರ ಕನ್ನಡ ಸೇವೆಯನ್ನು ಕುರಿತು ಮೇಲಿನಂತೆ ಕವಿ ಮನದುಂಬಿ ಹಾಡಿದ್ದಾರೆ. ಪಾದ್ರಿಯಾಗಿ ಬಂದ ಕಿಟೆಲ್ ಪ್ರತಿ ನಿತ್ಯವೂ ಚಿಂತನೆ ಮಾಡಿ ಕನ್ನಡ ಪದಕೋಶವನ್ನು ಅನೇಕ ಕೃತಿಗಳ ಶೋಧನೆಯ ಮೂಲಕ ಅವುಗಳಲ್ಲಿ ಅಡಗಿರುವ ಕನ್ನಡ ಪದಗಳ ಗೂಡಾರ್ಥ ತಿಳಿಯಲು ಕನ್ನಡ ನಿಘಂಟು ರಚಿಸಿದ್ದಾರೆ. ಮೂಲೆಗುಂಪಾಗಿದ್ದ ಕೆಲವು ಸಾಹಿತ್ಯ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದು, ಆ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದು, ಈ ಕೆಲಸಕ್ಕಾಗಿ ಗೌರವ ಡಾಕ್ಟರೇಟ್ ಪಡೆದುದು ಮುಂತಾದ ಅಂಶಗಳನ್ನು ಕುರಿತು ಮನದುಂಬಿ ಹೊಗಳಿದ್ದಾರೆ.

ವಿಶ್ವಕವಿ ರವೀಂದ್ರರನ್ನು ಕುರಿತು ಕವಿ ತಮ್ಮ ಕವನದಲ್ಲಿ ರವೀಂದ್ರರ ವ್ಯಕ್ತಿತ್ವವನ್ನು ಕುರಿತು ಅವರನ್ನು ವ್ಯಾಸ, ವಾಲ್ಮೀಕಿ, ಕಾಳಿದಾಸರಿಗೆ ಸಮ ಎಂಬಂತೆ ಚಿತ್ರಿಸಿದ್ದಾರೆ. ಅಲ್ಲದೆ ವರಕವಿ ಬೇಂದ್ರಯವರಿಗೆ ಪ್ರೇರಣ ಶಕ್ತಿಯಾಗಿ ಗುರುವಾಗಿ ಅವರ ಕಾವ್ಯಕ್ಕೆ ಸ್ಫೂರ್ತಿ ನೀಡಿದ್ದನ್ನು ನೆನಪಿಸಿಕೊಳ್ಳುತ್ತಾರೆ. ಅಲ್ಲದೆ ಗೀತಾಂಜಲಿ ಕವನಸಂಕಲನಕ್ಕೆ ನೋಬೆಲ್ ಪಾರಿತೋಷಕ ಪಡೆದ ಹಿರಿಮೆಯನ್ನು ಮೆಚ್ಚಿಕೊಳ್ಳುತ್ತಾರೆ.

"ನಿಮ್ಮ ನುಡಿ ಶುದ್ದ ನಡೆ ಶುದ್ದ ಜೀವನವು ಪರಿಶುದ್ದ
ನೀವು ರಚಿಸಿದ ಕತೆ, ಕವಿತೆ, ಕಾದಂಬರಿ, ನಾಟಕ
ಪ್ರಬಂಧ, ಪ್ರವಾಸ ವಿಜ್ಞಾನಗಳಲ್ಲದೆ ಚಿಕ್ಕವರಿಗಾಗಿ
ಬಾಲಬೋಧೆ, ಪತ್ರಿಕಾ ಸಾಹಿತ್ಯ ರಚನೆಯ ಶಿಲ್ಪಿಯಾದಿರಿ ನೀವು"[೧೭]

ಎಂದು ಅವರ ಬದುಕಿನ ಸಾಧನೆ ಸಿದ್ಧಿಯನ್ನು ವಿವರಿಸುತ್ತಾ ರವೀಂದ್ರರ ನಡೆ, ನುಡಿ, ಬದುಕು, ಶುದ್ದ ಮತ್ತು ಪರಿಶುದ್ದ ಅವರು ರಚಿಸಿದ ಸಾಹಿತ್ಯದ ವಿವಿಧ ಪ್ರಕಾರಗಳಾದ ಕಥೆ, ಕವನ ಕಾದಂಬರಿ, ನಾಟಕ, ಪ್ರಬಂಧ, ವಿಜ್ಞಾನ ಮುಂತಾದ ವಿಷಯಗಳಲ್ಲಿ ಅವರಿಗಿದ್ದ ಜ್ಞಾನದ ಹರವನ್ನು ಕುರಿತು ಚರ್ಚಿಸಿದ್ದಾರೆ. ಅಲ್ಲದೆ ಚಿತ್ರಕಲೆಯಲ್ಲಿದ್ದ ವಿಶೇಷ ಆಸಕ್ತಿಯನ್ನು ಕಂಡು ಬೆರಗಾಗಿದ್ದಾರೆ.

ರವೀಂದ್ರನಾಥರ ಸ್ವಭಾವವನ್ನು ಕುರಿತು

"ಗುರು ಹಿರಿಯರ ಮಾತುಗಳನ್ನು ಮೀರದೆ ಮನದಟ್ಟಾಗಿ ಅರಿತು
ಆಚರಣೆಯಲ್ಲಿ ತಂದ ಆಚಾರ್ಯಪುರುಷರೆನಿಸಿಕೊಂಡು"[೧೮]

ಎಂದು ರವೀಂದ್ರರು ಗುರು ಹಿರಿಯರ ಮಾತುಗಳನ್ನು ಮೀರದೆ, ಅವರ ಗೌರವಕ್ಕೆ ಪಾತ್ರರಾಗಿ ಅವರು ತೋರಿದ ಮಾರ್ಗದಲ್ಲಿ ನಡೆದು ವಿಶ್ವಸಾಹಿತ್ಯ ಕ್ಷೇತ್ರದಲ್ಲಿ ಹಿಮಾಲಯ ಪರ್ವತದಂತೆ ಬೆಳೆದುದನ್ನು ಕಂಡು ಕವಿ ಗೌರವ ಸಲ್ಲಿಸುತ್ತಾರೆ. ಹಾಗೆಯೇ ಮುಂದುವರಿದು ತಂದೆ ತಾಯಿಗಳ ಸರಳತೆ, ವಿರಕ್ತಿ, ಆಧ್ಯಾತ್ಮಿಕತೆಗಳನಲ್ಲದೆ, ಅಜ್ಜ ದ್ವಾರಕಾನಾಥನ ಆಡಂಬರ ವೈಭವಗಳನ್ನು ಸಮವಾಗಿ ಸ್ವೀಕರಿಸಿ ಮಹರ್ಷಿಯಂತೆ ಬೆಳೆದು ಹೆಮ್ಮರವಾಗಿ ನಿಂತುದನ್ನು ಕಂಡು ಕವಿ ಚಿಲಮಿ ರವೀಂದ್ರರನ್ನು ಮಹಾನ್ ತ್ಯಾಗಿ ಎಂದು ಕರೆದಿರುವರು. ಹಿಮಾಲಯ ಪರ್ವತ ಆರಾಧಕರಾಗಿ, ರಾಜಕೀಯ ತತ್ವಗಳ ಬೋಧಕರಾಗಿ, ವಿಶ್ವವಿಖ್ಯಾತ ಶಾಂತಿನಿಕೇತನ ಸ್ಥಾಪಿಸಿ ಗಾಂಧಿ, ನೆಹರು ಅವರಂತೆ ರಾಜಕೀಯ ಧುರೀಣರನ್ನು ಆಶ್ಚರ್ಯಚಕಿತರನ್ನಾಗಿ ಮಾಡಿದುದನ್ನು ಕಂಡು ಹರ್ಷ ವ್ಯಕ್ತಪಡಿಸುತ್ತಾರೆ. ರವೀಂದ್ರನಾಥ ಟ್ಯಾಗೂರರ ಇಡೀ ಬದುಕು ಮತ್ತು ಸಾಧನೆಯನ್ನು ಈ ಕವನದಲ್ಲಿ ಸೆರೆಹಿಡಿದಿದ್ದಾರೆ.

ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ರಾಷ್ಟ್ರಕವಿ ಕುವೆಂಪು ಅವರನ್ನು ಕುರಿತು ತಮ್ಮ ಕವನದಲ್ಲಿ ಹೀಗೆ ಹೇಳುತ್ತಾರೆ.

"ಬಿಳಿ ಗುಂಗುರುಗೂದಲಿನ ಸ್ವದೇಶೀಯುಡುಪಿನಲಿ
ಸರಳ ಜೀವನದ ರಸ ಋಷಿಯೇ!
ಮಲೆನಾಡಿನ ಶಿಶುವಾಗಿ ಸಾಹಿತ್ಯಾಕಾಶದಲ್ಲಿ
ನೀ ಮುಟ್ಟದ ಛಂದಸ್ಸು ಭಾಷೆ ಅನಂತ
ಸಾಹಿತ್ಯ ಪ್ರಕಾರಗಳ ಲೆಕ್ಕವಿಟ್ಟವರಾರು"[೧೯]

ಆಧುನಿಕ ಕನ್ನಡ ಸಾಹಿತ್ಯವು ಶ್ರೀಮಂತಗೊಳ್ಳುವಲ್ಲಿ, ಅದು ವಿಶ್ವಮಟ್ಟದಲ್ಲಿ ಪ್ರಸಾರವಾಗುವಲ್ಲಿ ಕುವೆಂಪು ಅವರು ವಹಿಸಿದ ಪಾತ್ರ ಅನಂತವಾದುದು. ಅವರ ಸಾಹಿತ್ಯ ಪ್ರಕಾರ ಹಾಗೂ ವ್ಯಕ್ತಿಚಿತ್ರಣ ಕುರಿತು ಮೇಲಿನ ಕವನದಲ್ಲಿ ವಿವರಿಸಿದ್ದಾರೆ. ಅವರ ತಲೆಯ ಬಿಳಿಯ ಗುಂಗುರುಗೂದಲು, ಅವರ ಉಡುವ ಸ್ವದೇಶಿಯ ಬಿಳಿಯ ಉಡುಪು ಅವರ ಸಾಹಿತ್ಯದಲ್ಲಿ ಮೂಡಿ ಬಂದ ವಸ್ತುನಿಷ್ಠತೆಯ ಪ್ರತಿರೂಪ, ಅವರ ಸರಳ ಜೀವನ ಕನ್ನಡ ಸಾಹಿತ್ಯದಲ್ಲಿ ಅವರನ್ನು ರಸಋಷಿಯನ್ನಾಗಿಸಿದೆ. ಮಲೆನಾಡಿನ ಈ ಶಿಶು ಸಾಹಿತ್ಯದ ಆಕಾಶದಲ್ಲಿ ಛಂದಸ್ಸು, ಭಾಷೆ, ಕಾವ್ಯ, ಕಾದಂಬರಿ, ವಿಮರ್ಶೆ ನಾಟಕ ಮುಂತಾದುವುಗಳು ಹೊಳೆವ ನಕ್ಷತ್ರಗಳಾಗಿ ಬೆಳಗಿ ಮಿಂಚಿದ್ದು ಸಕಲ ಸಾಹಿತ್ಯಾಸಕ್ತರಿಗೆ ಆದರ್ಶ ಎಂದು ಕವಿ

ಹೇಳುತ್ತಾರೆ. ಈ ಕವನದಲ್ಲಿ ಮುಂದುವರಿದು 'ಶ್ರೀ ರಾಮಯಣದರ್ಶನಂ' ಮಹಾಕಾವ್ಯದಲ್ಲಿ ಅಡಗಿಸಿದ ತತ್ವ ಸಿದ್ಧಾಂತಗಳ ಕುರಿತು ಚರ್ಚಿಸುತ್ತಾ, ಅವರಿಗೆ ಬಂದ ಪ್ರಶಸ್ತಿ ಪುರಸ್ಕಾರಗಳ ವಿವರ ನೀಡುತ್ತಾರೆ. ಇವರ ಕನ್ನಡ ನಾಡುನುಡಿಯ ಅಭಿಮಾನ 'ಮನುಜಮತ ವಿಶ್ವಪಥ ಸರ್ವರಿಗೆ ಸಮಬಾಳು ಸರ್ವರಿಗೂ ಸಮಪಾಲು' ಎಂಬ ತತ್ವ ಸಿದ್ಧಾಂತ ಸಾರ್ವತ್ರೀಕರಣಗೊಳಿಸಲು ಕುವೆಂಪು ಬದುಕಿನುದ್ದಕ್ಕೂ ಪಟ್ಟ ಶ್ರಮ ನಮ್ಮ ಬದುಕಿಗೆ ಮಾರ್ಗದರ್ಶಿಯಾಗಬೇಕೆಂದು ಕವಿ ಚಿಲಮಿಯವರು ಬಯಸಿದ್ದಾರೆ.

ವಚನ ಪಿತಾಮಹ ಡಾ.ಫ.ಗು.ಹಳಕಟ್ಟಿ ಅವರನ್ನು ಕುರಿತು ಬರೆದ 'ವಚನ ಪಿತಾಮಹನ ಸ್ಮರಣೆಯಲ್ಲಿ' ಎಂಬ ಕವನದಲ್ಲಿ, ಅವರ ಬದುಕಿನ ಹೋರಾಟ ಮತ್ತು ಸಾಧನೆಯನ್ನು ವಿವರಿಸಿದ್ದಾರೆ. ಕವನದ ಆರಂಭದಲ್ಲಿ 'ಹಳಕಟ್ಟಿ ಅವರ ವೇಷ ಭೂಷಣ, ಅವರ ದೇಹದಾರ್ಢ್ಯ, ಕುದುರೆ ಸವಾರಿ ಮತ್ತು ಅವರು ಆಡುವ ಮಾತು ಮುತ್ತಿನ ಹಾರ ಎಂದು ಹೇಳುತ್ತಾ, ಚಿಕ್ಕ ವಯಸ್ಸಿನಲ್ಲಿ ಶ್ರೀಯುತರು ಅಧ್ಯಯನ ಮಾಡಿದ ಭಾಗವತ ರಾಮಯಾಣ, ಮಹಾಭಾರತ, ಶೈವಪುರಾಣ, ಆಗಮ ಮುಂತಾದ ಧಾರ್ಮಿಕ ಗ್ರಂಥಗಳನ್ನು ಅಧ್ಯಯನ ಮಾಡಿದ್ದರ ಬಗ್ಗೆ ವಿವರಿಸುತ್ತಾರೆ. ಅಲ್ಲದೆ ೧೨ನೇ ಶತಮಾನದ ಶಿವಶರಣರು ರಚಿಸಿದ ವಚನ ಸಾಹಿತ್ಯದ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಪರಿಷ್ಕರಿಸಿ, ಪ್ರಕಟಿಸಿದ ಬಗೆಯನ್ನು ಕುರಿತು ಕೆಳಗಿನಂತೆ ವರ್ಣಿಸಿದ್ದಾರೆ.

"ವಚನ ಸಾಹಿತ್ಯ ತಾಳೋಲೆಯ ಕಟ್ಟುಗಳನ್ನು
ಸಡಿಲಿಸಿ ಪರಿಷ್ಕರಿಸಿ ಬಚ್ಚಿಟ್ಟು: ಬಿಚ್ಚಿಟ್ಟು
ಸುಲಿದ ಬಾಳೆಯ ಹಣ್ಣಿನಂದದಿ ಸುಲಭವಾಗಿಸಿದಿರಿ
ಛಿದ್ರ ಛಿದ್ರವಾಗಿ ನಾಶವಾಗಲಿರುವ ಲಕ್ಷೋಪಲಕ್ಷ ವಚನ
ಸಂಪಾದಿಸಿ ತನಿರಸದ ಸುಧೆಯುಣಿಸಿದ ವಿಜ್ಞಾನಿ"[೨೦]

ಮೂಲೆಗುಂಪಾಗಿದ್ದ ಶರಣರ ಹಸ್ತಪ್ರತಿಗಳನ್ನು ನೂರಾರು ಗ್ರಾಮಗಳನ್ನು ಸುತ್ತಿ ತಾಡೋಲೆಗಳನ್ನು ಸಂಗ್ರಹಿಸಿ ಅವುಗಳಲ್ಲಿರುವ ವಚನಗಳನ್ನು ಪರಿಷ್ಕರಿಸಿ ಜನಸಾಮಾನ್ಯರಿಗೆ ಅರ್ಥವಾಗುವ ಹಾಗೆ ಕವಿ ಸುಲಿದ ಬಾಳೆಯ ಹಣ್ಣಿನಂದದಿ ಸುಲಭವಾಗಿಸಿದಿರಿ, ತನಿರಸದ ಸುಧೆಯುಣಿಸಿದ ವಿಜ್ಞಾನಿ ಎಂದು ಕವಿ ಚಿಲಮಿ ಹಳಕಟ್ಟಿಯವರ ಬದುಕಿನ ಸಾಧನೆಯನ್ನು ಕೊಂಡಾಡಿದ್ದಾರೆ. ಅವರು ಮುಂದುವರಿದು 'ಬಸವಪಥ' ಅಂದರೆ ಬಸವಣ್ಣನವರು ತೋರಿದ ಸನ್ಮಾರ್ಗದಲ್ಲಿ ನಡೆದ ವಚನ ಬ್ರಹ್ಮ, ಬಸವಣ್ಣ, ಅಲ್ಲಮಪ್ರಭುವಿನಂತೆ ಹಳಕಟ್ಟಿಯವರು ಬಾಳಿದರೆಂದು ಕವಿ ಚಿಲಮಿಯವರು ಅವರ ಬದುಕಿನ ಸಾರ್ಥಕತೆಯನ್ನು ಪೂಜ್ಯಭಾವನೆಯಿಂದ ಕಂಡಿದ್ದಾರೆ.

"ವೀರಶೈವ ಧರ್ಮ ಸಾರದ ಸವಿಯನುಂಡು
ಷಟಸ್ಥಲ–ಅಷ್ಟಾವರಣ ಪಂಚಾಚಾರಗಳ ಸವಿದು
ಅನುಷ್ಠಾನಗೊಳಿಸಿ ಸಂತೃಪ್ತಿ ಹೊಂದಿದ ಮುಕ್ತಿಮಣಿ"[೨೧]

ವಚನ ಸಾಹಿತ್ಯದಲ್ಲಿ ಪ್ರತಿಬಿಂಬಿತವಾಗಿರುವ ವೀರಶೈವ ಧರ್ಮದ ಷಟಸ್ಥಲ, ಅಷ್ಟಾವರ್ಣ, ಪಂಚಾಚಾರಗಳ ತಿರುಳನ್ನು ಜೀರ್ಣಿಸಿಕೊಂಡು, ಅದನ್ನು ಬದುಕಿನಲ್ಲಿ ಅನುಷ್ಠಾನಗೊಳಿಸಿಕೊಂಡು, ಅದರ ಅರ್ಥದ ಹೂರಣವನ್ನು ಇತರರಿಗೆ ಉಣಬಡಿಸಿ ಬದುಕಿನ ಸಾರ್ಥಕತೆಯ ಸಂತೃಪ್ತಿಭಾವ ಹೊಂದಿದ ಈ ಮುಕ್ತಿಮಣಿಯನ್ನು ಕವಿ ಶ್ರದ್ಧೆಯಿಂದ ಕವನದ ಕೊನೆಯಲ್ಲಿ 'ವಚನ ಗುಮ್ಮಟ' ಎಂದು ಕರೆದು ನಮನ ಸಲ್ಲಿಸಿದ್ದಾರೆ.

**೪. ಧಾರ್ಮಿಕ ನೇತಾರರು**

ಪ್ರತಿಯೊಂದು ಧರ್ಮಕ್ಕೂ ತನ್ನದೇ ಆದ ತತ್ವ ಸಿದ್ಧಾಂತಗಳಿರುತ್ತವೆ. ಅವುಗಳ ಅನುಷ್ಠಾನ ಜಟಿಲವಾದಾಗ ಅವುಗಳನ್ನು ತಮ್ಮದೇ ನೆಲೆಯಲ್ಲಿ ಅರ್ಥೈಯಿಸಿ ಅದರ ಸಾರವನ್ನು ಜನ ಸಾಮಾನ್ಯರಿಗೆ ಮುಟ್ಟಿಸುವಲ್ಲಿ ಧಾರ್ಮಿಕ ನೇತಾರರ ಪಾತ್ರ ಮಹತ್ತರವಾದದು. ಈ ಧಾರ್ಮಿಕ ನೇತಾರರು ವಿವಿಧ ಕಾಲಘಟ್ಟಗಳಲ್ಲಿ, ಅಂದಿನ ಸಾಮಾಜಿಕ ಸ್ಥಿತ್ಯಂತರದಲ್ಲಿ ಧರ್ಮ ಅಧಃಪತನಗೊಳ್ಳುತ್ತಿರುವ ಸಂದರ್ಭದಲ್ಲಿ, ಧರ್ಮದ ಸಾರವನ್ನು ಸರಳೀಕರಿಸಿ ಜನಸಾಮಾನ್ಯರಿಗೆ ಅದರ ಹೂರಣವನ್ನು ಉಣಬಡಿಸುತ್ತಾರೆ. ಇಂತಹ ಧಾರ್ಮಿಕ ನೇತಾರರು ವೀರಶೈವ ಧರ್ಮದಲ್ಲಿ ಅನೇಕ ಜನ ಆಗಿ ಹೋಗಿದ್ದಾರೆ.

ಕವಿ ಚಿಲಮಿಯವರು 'ಧ್ವಿತೀಯಶಂಕರ' ಎಂಬ ಕವನದಲ್ಲಿ ಕ್ರಾಂತಿಕಾರಿ ಬಸವಣ್ಣನವರ ಬದುಕು, ಸಾಧನೆ ಕುರಿತು ವಿವರಿಸಿದ್ದಾರೆ ಮಾತ್ರವಲ್ಲದೆ, ಬಸವಣ್ಣನವರನ್ನು 'ಧ್ವಿತೀಯಶಂಕರ' ಎಂದು ಕರೆದಿರುವುದು ಎಲ್ಲರ ಕಣ್ಮನವನ್ನು ಸೆಳೆಯುತ್ತದೆ. ಈ ಕವನವು ಪುರಾಣ ಕಲ್ಪನೆಯಿಂದ ಪ್ರಾರಂಭವಾಗುತ್ತದೆ. ಬುದ್ಧ ಮತ್ತು ಬಸವಣ್ಣನ ಬದುಕಿನ ಅಂತರ ಮತ್ತು ಸಾಮ್ಯತೆಯನ್ನು ಕುರಿತು ವಿವರಿಸಲಾಗಿದೆ. ಬಸವಣ್ಣನನ್ನು ಕವಿ "ಮರ್ತ್ಯವನ್ನೇ ಕೈವಲ್ಯವನ್ನಾಗಿಸಿದ ಶಿವಪುತ್ರ"[೨೨] ಎಂದು ಹೇಳಿ, ಹನ್ನೆರಡನೆಯ ಶತಮಾನದ ರಾಜಕೀಯ ತಂತ್ರ ಕುತಂತ್ರದಲ್ಲಿ ಬೆಂದು, ಅಂತಹ ಸಂದರ್ಭದಲ್ಲೂ ಛಲಬಿಡದೆ ವೀರಶೈವ ಧರ್ಮದ ಸಾರವನ್ನು ಸಮಾನತೆಯ ತತ್ವದ ಆಧಾರದ ಮೇಲೆ ಜನಸಾಮಾನ್ಯರಿಗೆ ತಲುಪುವಂತೆ ಮಾಡಿದುದು ಬಸವಣ್ಣನವರ ಮಹತ್ವದ ಸಾಧನೆ. ಆದ್ದರಿಂದ ಕವಿ ಬಸವಣ್ಣನವರ ಕುರಿತು ಹೀಗೆ ಹೇಳಿದ್ದಾರೆ.

"ರಾಜಕೀಯ ತಂತ್ರದಲ್ಲಿ ಮಂತ್ರಿಯಾಗಿ ತಂತ್ರಿಸಿ
ಬಿಜ್ಜಳರಸನನ್ನು ಮರುಳುಗೊಳಿಸಿದ ಮಂತ್ರ ಗಾರುಡಿಗ"[೨೩]

ಎಂದು ಬಸವಣ್ಣ ರಾಜನೀತಿಯಲ್ಲಿ ಭಂಡಾರಿಯಾಗಿ ಪ್ರಧಾನಮಂತ್ರಿಯಾಗಿ ಜನಸಾಮಾನ್ಯರ ಜೊತೆ ಬಿಜ್ಜಳನನ್ನು ಮರುಳುಮಾಡಿದ ಮಂತ್ರಗಾರುಡಿಗ ಎಂದು ಕವಿ ಚಿಲಮಿ ಕರೆದಿದ್ದಾರೆ. ಕವಿ ಚಿಲಮಿಯವರು ಮುಂದುವರಿದು ಬಸವಣ್ಣನವರು ಪ್ರತಿಪಾದಿಸಿದ ಪಂಚಾಚಾರ, ಷಟಸ್ಥಲ, ಅಷ್ಟಾವರ್ಣ ಮತ್ತು ಸಮಾನತೆಯ ತತ್ವ, ಸ್ತ್ರೀ-ಪುರುಷರೆಂಬ ಅಭೇದ ಮುಂತಾದ ಅಂಶಗಳನ್ನು ಪ್ರತಿಪಾದಿಸಿ, ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಅವುಗಳು ಸ್ಥಿರವಾಗಿ ನೆಲೆಯೂರಲು ಪಟ್ಟಶ್ರಮ ವಹಿಸಿದ ಪಾತ್ರವನ್ನು ಕುರಿತು ಕವಿ ಹೀಗೆ ಹೇಳುತ್ತಾರೆ.

"ನೆಲಮುಗಿಲುಗಳಂತರಕೆ ಪಂಚಾಚಾರ ಅಷ್ಟಾವರಣ
ಷಟ್‌ಸ್ಥಲಗಳನ್ನು ಬೀರುತ್ತ ಸಾರುತ್ತ ಒಂದೊಂದೇ ಸೋಪಾನ
ಏರುತ್ತೇರುತ್ತ ಕೈಲಾಸವನ್ನು ಕಂಡರಿಸಿದ ಗಣನಾಯಕ
ಗುರು-ಲಿಂಗ-ಜಂಗಮರ ಸೇವಾಪಾತ್ರವನ್ನು ಸಾರುವ
ಮೇಲು-ಕೀಳು ಜಾತಿ ವಿಜಾತಿಗಳ ಪರೆಯ ಕಳಚುತ
ವಿಶಿಷ್ಟವೆಂಬಂತಹ 'ವೀರಶೈವ ಧರ್ಮ'ವನ್ನು ಸ್ಥಾಪಿಸಿದ
ಸ್ತ್ರೀ-ಪುರುಷರೆಂಬ ಭೇದ ಭಾವವನ್ನು ಎಣಿಸದೆ
ಸಮಾನತಾ ಬೀಜವನ್ನು ಬಿತ್ತಿ ಬೆಳೆಸಿದ ಕರ್ಮಯೋಗಿ"೨೪

ಎಂದು ಸಾಮಾಜಿಕ ವ್ಯವಸ್ಥೆಯಲ್ಲಿ ಗಾಢವಾಗಿ ನೆಲೆಯೂರಿದ ಮೌಢ್ಯತೆ, ಅಂಧಕಾರ, ಕಂದಾಚಾರ, ದುರ್ಬುದ್ಧಿ, ಮೂಢನಂಬಿಕೆಗಳನ್ನು ಬೇರು ಸಮೇತ ಕಿತ್ತೆಸೆದು, ಅದರ ಸ್ಥಾನದಲ್ಲಿ ಕಾಯಕ ದಾಸೋಹ, ಪಂಚಾಚಾರ, ಷಟ್‌ಸ್ಥಲ, ಅಷ್ಟಾವರಣ, ಸ್ತ್ರೀ ಸಮಾನತೆ, ಜಾತಿ ಸಮಾನತೆ ಮುಂತಾದ ಅಂಶಗಳು, ಅಂದಿನ ಹದಗೆಟ್ಟ ಸಾಮಾಜಿಕ ವ್ಯವಸ್ಥೆಯಲ್ಲಿ ಬೇರೂರುವಂತೆ ಮಾಡಿ, ಜನ ಸಾಮಾನ್ಯರಿಗೂ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ನೀಡಿ ತನ್ಮೂಲಕ ಹೊಸ ಸಮಾಜವನ್ನು ನಿರ್ಮಿಸುವಲ್ಲಿ ಅಂದಿನ ಸಮಾಜದಲ್ಲಿದ್ದ ಜಾತಿ ಜಾತಿಗಳ ನಡುವಿನ ಸಂಘರ್ಷ ನೆಲಮುಗಿಲಿಗಿರುವ ಅಂತರವನ್ನು ಕಡಿತಗೊಳಿಸಿ, ಎಲ್ಲ ಜನರಲ್ಲೂ ಸಮಾನತೆಯ ಬೀಜವನ್ನು ಬಿತ್ತಿ ಹೊಸ ಸಮಾಜದ ನಿರ್ಮಾಣಕ್ಕೆ ಕಾರಣೀಭೂತರು ಬಸವಣ್ಣನವರು ಎಂದೆನ್ನುತ್ತಾರೆ. ಜಾತಿವಿಜಾತಿಗಳ ಪೊರೆಯನ್ನು ಕಳಚುತ ಗುರುಲಿಂಗ ಜಂಗಮರ ಮಹತ್ವವನ್ನು ಪ್ರಚಾರಪಡಿಸಿ ವಿಶಿಷ್ಟವಾಗಿ ವೀರಶೈವ ಧರ್ಮವನ್ನು ಸ್ಥಾಪಿಸಿದ ಕೀರ್ತಿ ಬಸವಣ್ಣನವರಿಗೆ ಸಲ್ಲುತ್ತದೆ. ಅಲ್ಲದೆ ಕವಿ 'ಕರ್ಮಯೋಗಿ' ಎಂದು ಕರೆದಿರುವುದರಲ್ಲಿ ಔಚಿತ್ಯವಿದೆ. ಆದರೆ ಕವಿ ಅವರನ್ನು ವೀರಶೈವ ಸ್ಥಾಪಕ ಎಂದು ಕರೆದಿರುವುದನ್ನು ಹೆಚ್ಚಿನಸಂಶೋಧನೆಗೆ ಒಳಪಡಿಸಿ ಪುನಃ ಪರಿಶೀಲಿಸಬೇಕಾಗಿದೆ.

ಕವಿ ಈ ಕವನದಲ್ಲಿ ಮುಂದುವರಿದು ಪಾಪ, ಪುಣ್ಯ, ಸ್ವರ್ಗ, ನರಕ, ನಡೆ, ನುಡಿ, ಆಚಾರ, ವಿಚಾರ, ಸಿದ್ಧಿ ಮುಂತಾದ ಅಂಶಗಳನ್ನು ಜನಸಾಮಾನ್ಯರಿಗೆ ತಿಳಿಸಿ ಅವರನ್ನು

ಸನ್ಮಾರ್ಗದತ್ತ ಕೊಂಡೊಯ್ದು ಮಾಣಿಕ್ಯದ ದೀಪ್ತಿಯಾದಿರೆಂದು ಕವಿ ಬಸವಣ್ಣನವರನ್ನು ಚಿತ್ರಿಸುತ್ತಾರೆ.

ಬಸವಣ್ಣನವರು ಸೃಷ್ಟಿಸಿದ್ದ ಶರಣರ ಪಡೆ, ಕಟ್ಟಿದ ಮಹಾಮನೆ, ಅದರಲ್ಲಿ ಚರ್ಚೆಯಾಗುತ್ತಿರುವ ಅನುಭವ ಗೋಷ್ಠಿಯ ಮಹತ್ವ, ಎಲ್ಲಾ ಶರಣರ ಅನುಭಾವದಲ್ಲಿ ಸೃಷ್ಟಿಯಾದ ಪಂಚಶೀಲ ಸಪ್ತಶೀಲ ತತ್ವಗಳ ಮಂಥನಕ್ಕೆ ಒಂದು ವೇದಿಕೆಯಾದ ಅನುಭವ ಮಂಟಪವನ್ನು ಸಂಸ್ಥಾಪಿಸಿದ ತತ್ವಶಾಸ್ತ್ರಜ್ಞ ಬಸವಣ್ಣ. ಕನ್ನಡ ಸಾಹಿತ್ಯದಲ್ಲೇ ವಿಶಿಷ್ಟವೆನಿಸಿದ ವಚನಗಳ ಲಕ್ಷಣ, ಅವುಗಳಲ್ಲಿ ಅಡಗಿರುವ ಮಾನವೀಯ ಮೌಲ್ಯಗಳನ್ನು ಕುರಿತು ವಿವರಿಸುತ್ತಾ ಈ ಎಲ್ಲ ಅಂಶಗಳಿಗೆ ಕಾರಣೀಭೂತರಾದ ಬಸವಣ್ಣನವರನ್ನು ಕವಿ ಚೀಲಮಿಯವರು ಭಾವಪರವಶರಾಗಿ 'ಜಗಜ್ಯೋತಿ' ಎಂದು ಕರೆದಿದ್ದಾರೆ.

"ಜ್ಞಾನಯೋಗಿ ಶ್ರೀ ಸಿದ್ಧೇಶ್ವರ" ಎಂಬ ಕವನದಲ್ಲಿ ಕವಿ ಭಾವನಾತ್ಮಕ ನೆಲೆಯಲ್ಲಿ ಸಿದ್ಧೇಶ್ವರರು ಹುಟ್ಟಿ ಬೆಳವಣಿಗೆಯಾದ ಪರಿಯನ್ನು ಕವನದ ಆರಂಭದಲ್ಲಿ ಹೇಳಲು ಪ್ರಯತ್ನಿಸಿದ್ದಾರೆ.

"ಜ್ಞಾನ ಸಾಗರವೇ ತಾವಾಗಿ ಹೇಳುವ ತತ್ತ್ವದರ್ಶನಗಳು
ಪಾಶ್ಚಿಮಾತ್ಯ ತತ್ವಜ್ಞಾನಿಗಳನ್ನು ನೆನಪಿಸುವ ದೃಷ್ಟಾಂತಗಳು
ವೈಜ್ಞಾನಿಕ ಚಾರಿತ್ರಿಕ ಸಾಮಾಜಿಕ ರಾಜಕೀಯ ಸಾಂಸ್ಕೃತಿಕ
ಸಾಹಿತ್ಯಾರ್ಥಿಕದಂತಹ ಸಮಸ್ಯೆಗಳನ್ನು ಬಹು ಸುಲಭದಲ್ಲಿ
ಲೆಕ್ಕವನ್ನು ಬಿಡಿಸಿ ಹೇಳುವ ಉತ್ತಮ ಮೌಲ್ಯಮಾಪಕರು ನೀವು"[೨೫]

ಎಂದು ಸಿದ್ದೇಶ್ವರರ ಜ್ಞಾನದ ಎತ್ತರವನ್ನು ಪಾಶ್ಚಿಮಾತ್ಯ ತತ್ವಜ್ಞಾನಿಗಳಿಗೆ ಹೋಲಿಸುತ್ತಾರೆ. ಅವರ ತತ್ವದರ್ಶನಗಳಲ್ಲಿನ ವೈಜ್ಞಾನಿಕ, ಚಾರಿತ್ರಿಕ, ಸಾಂಸ್ಕೃತಿಕ, ರಾಜಕೀಯ, ಸಾಹಿತ್ಯಿಕ ಮುಂತಾದ ನೆಲೆಗಳಿಗೆ ಕೊಂಡೊಯ್ಯದು. ಈ ಎಲ್ಲಾ ಜ್ಞಾನ ಶಾಖೆಗಳಿಗೆ ಅವರ ಜ್ಞಾನವನ್ನು ಹೋಲಿಸಿ. ಅವರನ್ನು ಉತ್ತಮ ಮೌಲ್ಯ ಮಾಪಕರೆಂದು ಕರೆದುದ್ದನ್ನು ಪುನರ್ ಪರಿಶೀಲಿಸಬೇಕಾಗಿದೆ. ಅವರು ಮುಂದುವರೆದು,

"ವೇದಾಂತದ ಜ್ಞಾನವನ್ನು ಸರಳ ಸುಂದರ ಶೈಲಿಯಲ್ಲಿ ದಿನದ ಒಂದು
ಗಂಟೆಯಲ್ಲಿ ಪ್ರಪಂಚದನುಭವ ಜ್ಞಾನವನ್ನೇ ಬಿಚ್ಚಿಡುವ ಸುಜ್ಞಾನಿ
ನುಡಿದಂತೆ ನಡೆಯುವ ಸರಳ ಜೀವನದ ಘನ ವ್ಯಕ್ತಿತ್ವ ನಿಮ್ಮದು
ನಿಮ್ಮಂಥ ಮಹಾನುಭಾವಿಗಳು ದೇಶ ವಿದೇಶಗಳಲ್ಲೂ ಸಿಗಲಾರರು"[೨೬]

ಎಂದು ಕವಿ ಸಿದ್ದೇಶ್ವರರು ವೇದವನ್ನು ಕುರಿತು ಆಳವಾಗಿ ಅಧ್ಯಯನ ಮಾಡಿ ಅದರಿಂದ ಪಡೆದ ಜ್ಞಾನವನ್ನು ಸರಳೀಕರಿಸಿ ಜನಸಾಮಾನ್ಯರಿಗೆ ಮುಟ್ಟಿಸುವಂತಹ ವಾಕ್ ಸಿದ್ದಿಯನ್ನು ಕಂಡ ಕವಿ "ಸುಜ್ಞಾನಿ" ಎಂದು ಕರೆಯುತ್ತಾರೆ. ಅಲ್ಲದೆ ಬಸವಣ್ಣನವರ

ಆದರ್ಶದಂತೆ ನುಡಿದಂತೆ ನಡೆದು ಘನವ್ಯಕ್ತಿತ್ವ ರೂಪಿಸಿಕೊಂಡಿದ್ದಾರೆ ಎಂದು ಕವಿ ಹೇಳುತ್ತಾ ನಿಮ್ಮಂಥ ಮಹಾನುಭಾವಿಗಳು ದೇಶ ವಿದೇಶಗಳಲ್ಲು ಸಿಗಲಾರರು ಎಂದು ಸಿದ್ದೇಶ್ವರರ ವ್ಯಕ್ತಿತ್ವವನ್ನು ವೈಭವೀಕರಿಸುತ್ತಾರೆ.

ಒಟ್ಟಾರೆಯಾಗಿ ಈ ಕವನದಲ್ಲಿ ಕವಿ ಚಿಲಮಿಯವರು ಸಿದ್ದೇಶ್ವರರನ್ನು ದೇವಮಾನವರಂತೆ ವೈಭವೀಕರಿಸಿ ಚಿತ್ರಿಸಿರುವುದು ವಿಪರ್ಯಾಸದ ಸಂಗತಿ.

"ಮುರುಘಾಮಠದ ಮೃತ್ಯುಂಜಯಪ್ಪ" ಎಂಬ ಕವನದಲ್ಲಿ ಕವಿ ಚಿಲಮಿಯವರು ಧಾರವಾಡದ ಮುರಘಾಮಠದ ಮೃತ್ಯುಂಜಯ ಶಿವಯೋಗಿಗಳು ಶ್ರೀಮಠದ ಪಟ್ಟಾಧಿಕಾರವಹಿಸಿಕೊಂಡು ದೀನ ದಲಿತರ ಉದ್ಧಾರಕ್ಕಾಗಿ ತ್ರಿವಿದ ದಾಸೋಹವನ್ನು ಆರಂಭಿಸಿ ಜನಮಾನಸದಲ್ಲಿ ನೆಲೆಯೂರಿದ್ದಾರೆ. ಧಾರವಾಡದಲ್ಲಿ ಜೋಳಿಗೆಯ ಕಾಯಕದ ಮೂಲಕವಾಗಿ ತ್ರಿವಿಧ ದಾಸೋಹ ನಡೆಸಿದ ಪರಿಯನ್ನು ಮುಕ್ತ ಕಂಠದಿಂದ ಶ್ಲಾಘಿಸುತ್ತಾರೆ. ಅಲ್ಲದೆ

"ಬಸವ ಜಯಂತಿಯನ್ನು ಸಾರಿ ಆಚರಿಸೆಂದೆ
ಧನ ಕನಕವನ್ನು ಜೋಳೆಂದೇ ನೀ–ತಿಳಕೊಂಡೆ"[೨೭]

ಅಖಂಡ ಭಾರತದಲ್ಲಿ ಮೊದಲ ಬಾರಿಗೆ ಜಗಜ್ಯೋತಿ ಬಸವೇಶ್ವರ ಜಯಂತಿಯನ್ನು ಮೊದಲ ಬಾರಿಗೆ ಆಚರಿಸಿದವರಲ್ಲಿ ಮೃತ್ಯುಂಜಯ ಶಿವಯೋಗಿಗಳು ಪ್ರಮುಖರಲ್ಲಿ ಒಬ್ಬರು. ಅವರು ಬಸವಜಯಂತಿ ಆಚರಿಸುವ ಉದ್ದೇಶ ಮತ್ತು ಮಹತ್ವವನ್ನು ಕುರಿತು ತಿಳಿಹೇಳಿ ಆಚರಣೆಗೆ ತಂದರು ಅಲ್ಲದೆ ಹಣ, ಸಂಪತ್ತು, ಬಂಗಾರವನ್ನು ವಿಷಪೂರಿತ ಜೋಳೆಂದು ಅಂತರ್ಗತ ಮಾಡಿಕೊಂಡು ಆ ಧನ ಕನಕಾದಿಗೆ ಆಸೆ ಪಡದೆ ಜನಜಾಗ್ರತೆ ಮೂಡಿಸಿ ಸಮಾಜ ಉದ್ಧಾರ ಮಾಡಿರುವುದನ್ನು ಕವಿ ಚಿಲಮಿ ತುಂಬು ಹೃದಯದಿಂದ ಸ್ಮರಿಸುತ್ತಾರೆ.

ಹಾಗೆಯೇ ಮುಂದುವರಿದು ತಮ್ಮ ಇಡೀ ಬದುಕನ್ನು ಜ್ಞಾನ ದಾಸೋಹಕ್ಕೆ ಮೀಸಲುಗೊಳಿಸಿಕೊಂಡ ಪರಿಯನ್ನು ಕವಿ ಚಿಲಮಿಯವರು ಈ ರೀತಿ ಹೇಳಿದ್ದಾರೆ.

"ಜ್ಞಾನ ದಾಸೋಹಕ್ಕೆ ದೇಹ ಮೀಸಲೆಂದೆ
ಜ್ಞಾನ ಮಣಿಹವನು ನೀ ಹುಡುಕಿ ತಂದೆ"[೨೮]

ಹೀಗೆ ಮೃತ್ಯುಂಜಯ ಶಿವಯೋಗಿಗಳು ನಿರ್ಗತಿಕರ, ದುರ್ಬಲರ ಶಿಕ್ಷಣಕ್ಕಾಗಿ ಶಾಲಾ ಕಾಲೇಜು ಸ್ಥಾಪಿಸಿದರು. ವಿದ್ಯಾರ್ಥಿಗಳ ವಸತಿಗಾಗಿ ಪ್ರಸಾದ ನಿಲಯ ಸ್ಥಾಪಿಸಿ, ಅನ್ನ ದಾಸೋಹ ನಡೆಸಿದರು. ಇದಕ್ಕಾಗಿ ಅವರು ಪಟ್ಟಶ್ರಮ ಅಪಾರವಾದದು. ಇವರ ಈ ಉಚಿತ ಜ್ಞಾನ ಮತ್ತು ಅನ್ನದಾಸೋಹ ಬಡ ವಿದ್ಯಾರ್ಥಿಗಳ ಬಾಳು ಬೆಳಗಿ ಬದುಕು ಹಸನಾಗಿಸುವಲ್ಲಿ ಮಹತ್ವದ ಪಾತ್ರವಹಿಸಿದೆ. ಈ ಹಿನ್ನೆಲೆಯಲ್ಲಿ ಕವಿ ಚಿಲಮಿಯವರು ಇಂತಹ ಶ್ರಮ ಸಾರ್ಥಕಗೊಳ್ಳಬೇಕಾದಲ್ಲಿ ಗುರು ಲಿಂಗಜಂಗಮರ ನಿತ್ಯ ಸೇವೆಯಲ್ಲಿ ನಾವು ತೊಡಗಬೇಕೆಂದು ಕರೆ ನೀಡುತ್ತಾರೆ.

"ಸೊಗಲದ ಶಿವ" ಎಂಬ ಕವನದಲ್ಲಿ ಕವಿ ಚಿಲಮಿಯವರು ಕುಳ್ಳೊರಿಗೆ ಶಿವಯೋಗಿಗಳನ್ನು ಬೂದನೂರಿನ ಗಿರಿಯಪ್ಪ ಮಲ್ಲಪ್ಪ ಶರಣರು ಬರಮಾಡಿಕೊಂಡ ಪ್ರಸಂಗವನ್ನು, ಶಿವಯೋಗಿಗಳ ಮಹಿಮಾ ಪವಾಡಗಳನ್ನು ಚಿತ್ರೀಕರಿಸಿದ್ದಾರೆ. ಸೊಗಲದ ಶಿವಯೋಗಿಗಳನ್ನು ಕವಿ "ಭಕ್ತರ ಶಿರೋಮಣಿ ಶಾಸ್ತ್ರದ ದಿನಮಣಿ"[೨೯] ಎಂದು ಕರೆದಿರುವುದು ಅನೇಕ ಚಿಂತನೆಗಳಿಗೆ ಎಡೆಮಾಡಿಕೊಡುತ್ತದೆ.

ಸೊಗಲದ ಶಿವಯೋಗಿಗಳು ಭವ ಬಂಧನದಿಂದ ವಿಮುಕ್ತಿ ಹೊಂದಿ ಅದೇ ಊರಿನ ಸೋಮನಾಥ ದೇವರ ಅರ್ಚಕರಾಗಿ ತದನಂತರದ ಕಾಲಘಟ್ಟದ ಸ್ಥಿತ್ಯಂತರದಲ್ಲಿ ವಿರಕ್ತರಾಗಿ ಸಮಾಜಕಲ್ಯಾಣದಲ್ಲಿ ತೊಡಗಿದ್ದನ್ನು ಕವಿ ಸೊಗಸಾಗಿ ಚಿತ್ರಿಸಿದ್ದಾರೆ.

"ಬೆಟ್ಟದೆತ್ತರದಾ ಏಣಿಯ ಏರಿ
ಸೂಜಿಗಲ್ಲಿನಾ ಬಂಡೆಗಲ್ಲಿನ ತುದಿಯಲ್ಲಿ ತಪವಗೈದು
ಯೋಗಿಯೆನಿಸಿಕೊಂಡ ಸೊಲಗದ ಶಿವಯೋಗಿ"[೩೦]

ವಿರಕ್ತರಾದ ಸೊಲಗದ ಶಿವಯೋಗಿಗಳು ಭಕ್ತರ ಉದ್ಧಾರಕ್ಕಾಗಿ ತ್ಯಾಗ ಮಾಡಿ ತಪಸ್ಸು ಮಾಡಿ, ಸಾಧನೆ ಸಿದ್ಧಿಯ ಪರ್ವತದ ಏಣಿಯನ್ನು ಏರಿ, ಸೂಜಿಗಲ್ಲಿನಂತಿರುವ ಬಂಡೆಗಲ್ಲಿನ ತುದಿಯ ಮೇಲೆ ಉಗ್ರತಪಸ್ಸು ಆಚರಿಸಿದ್ದು. ಆ ಮೂಲಕ ಭಕ್ತರ ಉದ್ಧಾರಕ್ಕಾಗಿ ಕಾರ್ಯಸಿದ್ಧಿಯನ್ನು ಪಡೆದು 'ಯೋಗಿ' ಎನಿಸಿಕೊಂಡ ಪರಿಯನ್ನು ಕುರಿತು ಕವಿ ವಿವರಿಸುತ್ತಾ ಕೊನೆಯ ಭಾಗದಲ್ಲಿ "ಶಿವನೊಲುಮೆಯಾ ಕಾರಣಿಕ ಶಿಶುವಾದ ಶಿವಯೋಗಿ"[೩೧] ಎಂದು ಉತ್ಪ್ರೇಕ್ಷೆ ಮಾಡಿದ್ದಾರೆ.

### ೫. ಅಂತರಂಗ ವಿವೇಚನೆ

ಯಾವುದೇ ಸೃಜನಶೀಲ ಲೇಖಕ ತನ್ನ ಕೃತಿಗಳಲ್ಲಿ ಯಾವುದಾದರು ಒಂದು ಭಾಗದಲ್ಲಿ, ತಾನು ನಡೆದು ಬಂದ ದಾರಿ, ಪಟ್ಟಶ್ರಮ, ಶಿಕ್ಷಣ, ಪ್ರಭಾವ, ಬೀರಿದ ವ್ಯಕ್ತಿಗಳು, ಪ್ರೋತ್ಸಾಹಿಸಿದ ಗಣ್ಯರು, ತನ್ನ ವ್ಯಕ್ತಿತ್ವ ವಿಶೇಷ ಹವ್ಯಾಸಗಳು, ತನ್ನ ಈ ಮುನ್ನಡೆಗೆ ಕಾರಣೀಭೂತರು, ಗುಣ ಸ್ವಭಾವ ಮುಂತಾದ ವ್ಯಕ್ತಿಗತ ವಿವರಗಳನ್ನು ಹೇಳಿಕೊಂಡಿರುವುದನ್ನು ಆದಿಕವಿ ಪಂಪನಿಂದ ಮೊದಲುಗೊಂಡು ಆಧುನಿಕ ಬರಹಗಾರರವರೆಗೂ ಕಾಣುತ್ತೇವೆ. ಇದಕ್ಕೆ ಆರ್.ಬಿ.ಚಿಲಮಿಯವರು ಹೊರತಾಗಿಲ್ಲ. ಇವರು ತಮ್ಮ "ಬತ್ತೀಸರಾಗ" ಕವನ ಸಂಕಲನದಲ್ಲಿ ತಾವು ಬೆಳೆದು ಬಂದ ಪರಿ ಅನುಭವಿಸಿದ ಕಷ್ಟಗಳು ಜೀವನ ವಿವರಗಳನ್ನು ಕುರಿತು 'ಒಡಲಾಳ'ಎಂಬ ಕವನದಲ್ಲಿ ಹೇಳಿಕೊಂಡಿದ್ದಾರೆ.

"ಬೆವರು ಸುರಿಸಿ ನಾಕ ಅಕ್ಷರವ ಬಿತ್ತಿದರೆಮ್ಮವರು
ಪರಿಸ್ಥಿತಿಯರ್ಥೈಸಿ ಸಾಧಿಸಿದ್ದಕ್ಕೆ ತಕ್ಕ ಶಾಸ್ತಿ"[೩೨]

ಕವಿ ತನ್ನ ಬಾಲ್ಯವನ್ನು ಅರಿತು ನೆನಪಿಸಿಕೊಳ್ಳುವಾಗ ಕೂಲಿನಾಲಿ ಮಾಡಿ ತಮ್ಮ ಹೆತ್ತವರು, ಸಹೋದರರು, ಕವಿ ಚಿಲಮಿಯವರನ್ನು ಓದಲು ಪ್ರೇರೇಪಿಸಿದ್ದು, ಅವರು ಬೆವರು ಸುರಿಸಿ ಸಂಪಾದಿಸಿದ ಹಣ ಚಿಲಮಿಯವರ ವಿದ್ಯಾಭ್ಯಾಸಕ್ಕೆ ವಿನಿಯೋಗಗೊಂಡ ಪರಿ, ಅದರಿಂದ ಕವಿಗೆ ದೊರಕಿದ ಫಲ ಎಂಥದ್ದು ಎಂಬುದನ್ನು ಕವಿ ಮನನ ಮಾಡಿಕೊಳ್ಳುತ್ತಾರೆ. ಶ್ರೀಯುತರು ಸ್ನಾತಕೋತ್ತರ ಪದವಿಯನ್ನು ಪಡೆದ ಮೇಲೆ ಆ ಸರ್ಟಿಫಿಕೇಟುಗಳ ಹಿನ್ನೆಲೆಯಲ್ಲಿ ಕೆಲಸಕ್ಕಾಗಿ ಅಲೆದಾಡಿ, ಬದುಕಿನಲ್ಲಿ ನಿರಾಸೆ ಮೂಡಿಸಿಕೊಂಡದ್ದನ್ನು ಕಂಡು ತಮ್ಮ ಪದವಿ ಪ್ರಮಾಣ ಪತ್ರಗಳು ಚುರುಮರಿ ಉಪ್ಪಿಟ್ಟು ಹಾಕಿಕೊಳ್ಳಲೂ ಅನರ್ಹ ಎಂದು ಭಾವಿಸುತ್ತಾರೆ ಹಾಗೆಯೇ

"ವಿಶ್ವವಿದ್ಯಾಲಯಗಳೆಂದರೆ ನಿರುದ್ಯೋಗಿ ಪದವೀಧರರ
ಉತ್ಪಾದಿಸುವ ಕಾರ್ಖಾನೆಗಳಿದ್ದಂತೆ ಎಂಬೂದೂ
ಗಮನಕ್ಕೆ ಬಂದುದು ಸಂದರ್ಶನಗಳವದಿಯಲ್ಲಿಯೇ"[೩೩]

ಕವಿ ಚಿಲಮಿಯವರ ದೃಷ್ಟಿಯಲ್ಲಿ ವಿಶ್ವವಿದ್ಯಾಲಯಗಳು ಮತ್ತು ಅವುಗಳು ನೀಡುವ ಪದವಿಗಳು ಅಪ್ರಯೋಜಕವಾದವು. ವಿಶ್ವವಿದ್ಯಾಲಯಗಳು ಒಂದು ರೀತಿಯಲ್ಲಿ ನಿರುದ್ಯೋಗಿಗಳನ್ನು ಸೃಷ್ಟಿಸುವ ಕಾರ್ಖಾನೆಗಳು ಇದ್ದಂತೆ ಎಂದು ಅವರು ಭಾವಿಸಿದ್ದಾರೆ. ಈ ಅನುಭವ ಅವರಿಗೆ ಸ್ನಾತಕೋತ್ತರ ಪದವಿಯ ಪ್ರಮಾಣ ಪತ್ರಗಳನ್ನು ಹಿಡಿದು, ಕೆಲಸಕ್ಕಾಗಿ ಸಂದರ್ಶನಕ್ಕೆ ಹೋಗಿ ವಿಫಲವಾದಾಗ, ಈ ಬಗೆಯ ಚಿಂತನೆ ಮೂಡಿರುವುದು ಸಹಜವೇ ಆದುದಾಗಿದೆ.

'ಗುರುವಂದನೆ' ಎಂಬ ಕವನದಲ್ಲಿ ಕವಿ ಚಿಲಮಿಯವರು ಗುರುವಿನ ಮಹತ್ವ, ಗುರುವಿನ ಉದಾರತೆ, ಗುರುವಿನ ಮೌಲ್ಯ ಮುಂತಾದ ಅಂಶಗಳನ್ನು ಕವನದ ಆರಂಭದಲ್ಲಿ ಹೇಳುತ್ತಾ "ಆವಾಗಳೂ ಗುರಿವಿನ ಗುಲಾಮನಾಗದ ತನಕ ದೊರೆಯದಣ್ಣ ವಿದ್ಯೆ"[೩೪] ಎನ್ನುತ್ತಾರೆ. ಹಾಗೆಯೇ ಮುಂದುವರಿದು ಗುರುವಿನಿಂದ ಪಡೆದ ವಿದ್ಯೆ ವ್ಯಕ್ತಿಯನ್ನು ಯಾವ ಮಟ್ಟಕ್ಕೆ ಕರೆದೊಯ್ಯಬಹುದೆಂಬದುನ್ನು ವಿವರಿಸಿದ್ದಾರೆ.

"ಓದು ಕಲಿಸಿದ ತಂದೆ-ತಾಯಿ ಗುರು-ಬಂಧು-ಬಳಗ
ಯಾರಿದ್ದರೂ ಅವರನ್ನು ಮರೆಯಲು ಸಾಧ್ಯವಾದೀತೇ?
ಮರೆತವನು ಮಾನವನಲ್ಲ ದಾನವನು!
ಗುರುಕರುಣಿ-ಗುರು ಸ್ಮರಣಿಯೊಂದಿದ್ದರೆನೇ ಸದ್ಗತಿ
ಗುರುಕರುಣಿಯಿಂದಲೇ ಸಕಲ ಸಂಪದವು ಪ್ರಾಪ್ತವಹುದು"[೩೫]

ಎಂದು ವಿದ್ಯೆಕಲಿಸಿದ ತಂದೆ, ತಾಯಿ, ಗುರು, ಬಂಧು ಯಾರೇ ಆಗಿದ್ದರೂ, ಅವರನ್ನು ಬದುಕಿನಲ್ಲಿ ಮರೆಯಬಾರದು. ಅವರನ್ನು ಮರೆತವರು ಮನುಷ್ಯರಲ್ಲ ಬದಲಾಗಿ ರಾಕ್ಷಸರಾಗುತ್ತಾರೆ. ಈ ಗುರುಕರುಣೆಯಿಂದ ಸದ್ಗತಿ ಮತ್ತು ಸಂಪತ್ತು ಪ್ರಾಪ್ತವಾಗುತ್ತದೆ ಎಂದು

ಕವಿ ಸಂಭ್ರಮ ಪಡುತ್ತಾರೆ. ಇಂಥ ಸಂಪತ್ತನ್ನು ಪಡೆದ ಶಿಷ್ಯನು ಧನ್ಯ. ಆ ಶಿಷ್ಯನು ಗುರುವನ್ನು ಸಕಲ ರೀತಿಯಲ್ಲಿ ಗೌರವಿಸಿ, ಗುರು ತೋರಿದ ಮಾರ್ಗದಲ್ಲಿ ನಡೆದು ಗುರುವಿನ ಋಣವನ್ನು ತೀರಿಸಬೇಕೆಂದು ಕವಿ ಕರೆ ನೀಡುತ್ತಾರೆ. ಪುಲಿಗೆರೆ ಸೋಮನಾಥನ "ವರ್ಣ ಮಾತ್ರಂ ಕಲಿಸಿದಾತಂ ಗುರು" ಎಂಬ ಆದರ್ಶ ನುಡಿಯನ್ನು ಚಿಲಮಿಯವರು ಈ ಕವನದಲ್ಲಿ ಅಭಿವ್ಯಕ್ತಿಸಿದ್ದಾರೆ.

'ಕವಿ' ಎಂಬ ಕವನದಲ್ಲಿ ಚಿಲಮಿಯವರು ತಾವು ಕವಿಯಾಗಲು ಪ್ರೇರಣೆ ನೀಡಿದ ಅಂಶ ಕವಿಯಾಗಲು ಬೇಕಾದ ಪ್ರತಿಭೆ ಕವಿಗೆ ಕವನಕ್ಕೆ ಆಯ್ಕೆ ಮಾಡಿಕೊಳ್ಳಬೇಕಾದ ವಸ್ತು, ವಿಷಯ ವಿಶ್ಲೇಷಣೆಯ ಸಾಮರ್ಥ್ಯ, ಕವಿ ಸಮಾಜಕ್ಕೆ ನೀಡುವ ಕೊಡುಗೆ ಮುಂತಾದ ಅಂಶಗಳನ್ನು ಈ ಕವನದಲ್ಲಿ ಸಭ್ಯವಾಗಿ ತೋಡಿಕೊಳ್ಳುತ್ತಾರೆ.

"ನಾಲ್ಕೇ ನಾಲ್ಕು ಸಾಲು ತಮಗೆ ತೋಚಿದ್ದನ್ನು ಗೀಚಿ
ಕವಿಗಳೆನಿಸಿಕೊಳ್ಳಾ ಖ್ಯಾತಿಯ ಬೆನ್ನು ಹತ್ತಿದ ಜನಾ ಭಾಳ
ಹಾಂಗ ನನಗೂ ಕವಿತಾ ಬರಿಯಾ ಗುಂಗ ಹಿಡೀತು
ಅದರಾಗ ನನಗ ಪ್ರಭಾವ ಬೀರಿದ ಉದ್ದಾಮ ಕವಿಗಳ
ಕವನ ರಚನಾ ಚಾತುರ್ಯ ಮುದ್ದಾಮ ಓದಿಯೇ!
ಬೆರಗಾಗಿ ನಾನು ಯಾಕ ಕವನಾ ಬರಿಬಾರದು?"[೩೬]

ಎಂದು ಚಿಲಮಿಯವರು ತಾವು ಕವಿಯಾದ ಬಗೆಯನ್ನು, ಕವನ ರಚನೆ ಸ್ಫೂರ್ತಿಯನ್ನು ಕುರಿತು ಆತ್ಮ ನಿವೇದನೆ ಮಾಡಿಕೊಳ್ಳುತ್ತಾರೆ. ಬೇರೆ ಕವಿಗಳಂತೆ ನಾಲ್ಕು ಸಾಲನ್ನು ಗೀಚಿ ಕವಿಗಳೆನ್ನಿಸಿಕೊಳ್ಳದೆ, ತಮ್ಮ ಮೇಲೆ ಪ್ರಭಾವ ಬೀರಿದ ಪ್ರಖ್ಯಾತ ಕವಿಗಳ ಬದುಕನ್ನು ಮತ್ತು ಅವರ ಕವನಗಳ ರಚನಾ ಚಾತುರ್ಯವನ್ನು, ಆಳವಾಗಿ ಅಧ್ಯಯನ ಮಾಡಿ, ಅದೇ ಸ್ಫೂರ್ತಿಯಿಂದ ಕವನ ರಚನಾ ಕಾರ್ಯಕ್ಕೆ ತೊಡಗುತ್ತಾರೆ. ಅವರಿಗೆ ಸ್ಫೂರ್ತಿ ಬರುವಂತೆ ತಮ್ಮ ಮೇಲೆ ಪ್ರಭಾವ ಬೀರಿದ ಕವಿಗಳು, ಕವಿಸಮ್ಮೇಳನ, ರೇಡಿಯೊ, ಟಿ.ವಿ.ಮುಂತಾದ ಮಾಧ್ಯಮದಲ್ಲಿ ಸ್ವರಚಿತ ಕವನವನ್ನು ವಾಚನ ಮಾಡಿದ್ದನ್ನು ಕೇಳಿ ಕವನ ಬರೆಯಲು ತೊಡಗಿದೆ ಎಂದು ಹೇಳುತ್ತಾರೆ. ಸಮಾಜದೊಳಗಿನ ಕೆಲವು ಸಂಗತಿಗಳನ್ನು ನೋಡಿ ನೊಂದುಬೆಂದು ತಮ್ಮ ಒಡಲಾಳದಲ್ಲಿ ಕವನಗಳು ಬತ್ತೀಸರಾಗಗಳಾಗಿ ಹುಟ್ಟಿದವುಗಳೆಂದು ಹೇಳಿಕೊಳ್ಳುತ್ತಾರೆ.

ಹಾಗೇಯೆ ಮುಂದುವರಿದು.

"ಕೆಲವರಂತೂ ಅವರಿವರ ಕವಿತಾ ತುಣುಕು ಕದ್ದಾಯ್ದುಕೊಂಡು
ಕವಿತಾ ಬರೆದ 'ಕವಿ'ತಾ ಅನಿಸಿಕೊಬೇಕೆನ್ನೂ ಚಪಲದ

ಗುಂಪು ಮತ್ತೊಂದು ಹಿಂಗ ಹೇಳ್ತ ಹ್ವಾದ್ರ ಪಟ್ಟಿ ದೊಡ್ಡದಾದೀತು!
ಎಷ್ಟಾದರೂ ಸಮಾಜದೊಳಗಿನ ದೋಷಾದೋಷಗಳನ್ನು
ನಿವಾರಣಾ ಮಾಡೂ ಸಾಹಸ ಕವಿ ಮಹಾಶಯನದ್ದು"[೩೭]

ಎಂದು ಕವಿ ಚಿಲಮಿಯವರು ಆಧುನಿಕ ಸಂದರ್ಭದಲ್ಲಿ ಕೆಲವು ಕವಿಗಳು ಬೇರೆಯವರ ಕವನದ ಸಾಲುಗಳನ್ನು ಕದ್ದಾಯ್ದುಕೊಂಡು ತಾವು ಆ ಕವನವನ್ನು ಬರೆದೇವೆಂದು ತಮ್ಮನ್ನು ಕವಿ ಎಂದು ಪರಿಗಣಿಸಬೇಕೆಂದು ಒತ್ತಾಯ ಪಡಿಸುವ ಕೃತಕ ಕವಿಗಳನ್ನು ಕಂಡು ಕೋಪಿಸಿಕೊಳ್ಳುತ್ತಾರೆ.

"ಒಟ್ಟಿನ ಮ್ಯಾಲ ಕವಿಯಾದಾಂವ ಸಮಾಜ ಸುಧಾರಕ
ಅಂಥಾ ಕೆಲಸಾ ಮಾಡಿದರ ಲೋಕ ಕಲ್ಯಾಣಾದೀತು!"[೩೮]

ಎಂದು ಕವಿ ಚಿಲಮಿಯವರು ಒಟ್ಟಾರೆಯಾಗಿ ಕವಿಯ ದೃಷ್ಟಿಧೋರಣೆ ಅವನು ಸಮಾಜದಲ್ಲಿರುವ ಮೌಢ್ಯತೆಗಳನ್ನು ಅಳಿಸಲು ಮಾಡಬೇಕಾದ ಕೆಲಸ ಕವಿಯ ಜವಾಬ್ದಾರಿ ಮುಂತಾದ ಅಂಶಗಳನ್ನು ಕುರಿತು ನಿರ್ವಚಿಸಿದ್ದಾರೆ.

ಒಟ್ಟಾರೆಯಾಗಿ ಕವಿ ಆರ್.ಬಿ.ಚಿಲಮಿಯವರ 'ಬತ್ತೀಸರಾಗ' ಕವನ ಸಂಕಲನವು ಮಾನವನ ಸಹಜ ಬದುಕಿನ ಅಂಶಗಳನ್ನು ಎತ್ತಿ ಹಿಡಿದಿದೆ. ಸಾಹಿತ್ಯಿಕ ದೃಷ್ಟಿಯಿಂದ ಇವರ ಕವನಗಳಲ್ಲಿ ಛಂದಸ್ಸಿನ ಅಂಶಗಳು ಹೆಚ್ಚು ಬಳಕೆಯಾಗಿಲ್ಲ. ಇಲ್ಲಿನ ಕವಿತೆಗಳು ಗದ್ಯದಂತೆ ಕಂಡರೂ ಬದುಕಿನ ನೇರ ನಿರೂಪಣೆಯನ್ನು ಹೊಂದಿವೆ. ಬದುಕಿನಲ್ಲಿ ಒದಗುವ ಅನೇಕ ಸಮಸ್ಯೆಗಳನ್ನು ನೇರವಾಗಿ ನಿರೂಪಿಸಿದ್ದಾರೆ. ಈ ಕವನಗಳಲ್ಲಿ ಯಾವುದೇ ತರಹದ ಕಲ್ಪನೆಗಳು ಐತಿಹ್ಯಗಳು ಕಂಡು ಬರುವುದಿಲ್ಲವಾದರೂ ಕವನಗಳ ವಸ್ತು ಆಯ್ಕೆ ಮತ್ತು ವಿಶ್ಲೇಷಣೆ ಉನ್ನತ ಮಟ್ಟದಲ್ಲದಿದ್ದರೂ ಕವಿ ಚಿಲಮಿಯವರ ಕವನ ರಚನೆ ಮೊದಲ ಪ್ರಯತ್ನ ಇದಾಗಿದ್ದರಿಂದ ಚಿಲಮಿಯವರ ಮನಸ್ಸಿನೊಳಗೊಬ್ಬ ಕವಿ ಇದ್ದಾನೆಂದು ಭಾವಿಸಬಹುದಾಗಿದೆ. ಈ ಕವನಸಂಕಲನಕ್ಕೆ ಶ್ರೀಯುತರು ಇಟ್ಟಿರುವ 'ಬತ್ತೀಸ ರಾಗ' ಎಂಬ ಶೀರ್ಷಿಕೆಯು ಔಚಿತ್ಯ ಪೂರ್ಣವಾಗಿಲ್ಲ. ಏಕೆಂದರೆ ಇದರಲ್ಲಿರುವ ಕವನಗಳು ರಾಗ ಮತ್ತು ಲಯ ಪ್ರಧಾನವಾಗಿಲ್ಲ. ಇವರ ಕವನಗಳಲ್ಲಿ ಬಳಸಿರುವ ಬೆಳಗಾವಿ ಪರಿಸರದ ಭಾಷೆಯು ಕವನಗಳಿಗೆ ವಿಶೇಷ ಸೌಂದರ್ಯವನ್ನು ಒದಗಿಸಿ ಸಹೃದಯರ ಗಮನ ಸೆಳೆಯುತ್ತವೆ ಎಂದು ಹೇಳಬಹುದು.

# ಅಡಿ ಟಿಪ್ಪಣಿಗಳು

೦೧. ದಶಕದ ಕನ್ನಡ ಸಾಹಿತ್ಯ, (ಸಂ) ಡಾ.ಎಫ್.ಟಿ. ಹಳ್ಳಿಕೇರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೮, ೨೦೦೨

೦೨. ಬತ್ತಿಸರಾಗ, ಡಾ.ಆರ್.ಬಿ.ಚಿಲಮಿ, ಪುಟ-೦೭

೦೩. ಅದೇ ಪುಟ-೦೯

೦೪. ಅದೇ ಪುಟ-೧೧

೦೫. ಅದೇ ಪುಟ-೦೮

೦೬. ಅದೇ ಪುಟ-೩೬

೦೭. ಅದೇ ಪುಟ-೩೯

೦೮. ಅದೇ ಪುಟ-೩೯

೦೯. ಅದೇ ಪುಟ-೪೧

೧೦. ಅದೇ ಪುಟ-೪೨

೧೧. ಅದೇ ಪುಟ-೪೨

೧೨. ಅದೇ ಪುಟ-೪೨

೧೩. ಅದೇ ಪುಟ-೪೬

೧೪. ಅದೇ ಪುಟ-೪೭

೧೫. ಅದೇ ಪುಟ-೧೪

೧೬. ಅದೇ ಪುಟ-೧೫

೧೭. ಅದೇ ಪುಟ-೧೫

೧೮. ಅದೇ ಪುಟ-೧೯

೧೯. ಅದೇ ಪುಟ-೩೦

೨೦. ಅದೇ ಪುಟ-೩೧

೨೧. ಅದೇ ಪುಟ-೧೭

೨೨. ಅದೇ ಪುಟ-೧೭

೨೩. ಅದೇ ಪುಟ-೧೭

೨೪. ಅದೇ ಪುಟ-೨೧

೨೫. ಅದೇ ಪುಟ-೨೧

೨೬. ಅದೇ ಪುಟ-೨೭

೨೭. ಅದೇ ಪುಟ-೨೭

೨೮. ಅದೇ ಪುಟ-೨೮

೨೯. ಅದೇ ಪುಟ-೨೮

೩೦. ಅದೇ ಪುಟ-೨೯

೩೧. ಅದೇ ಪುಟ-೫೧

೩೨. ಅದೇ ಪುಟ-೫೧

೩೩. ಅದೇ ಪುಟ-೦೧

೩೪. ಅದೇ ಪುಟ-೦೧

೩೫. ಅದೇ ಪುಟ-೦೨

೩೬. ಅದೇ ಪುಟ-೦೨

೩೭. ಅದೇ ಪುಟ-೦೩

೩೮. ಅದೇ ಪುಟ-೦೩

# ಅಧ್ಯಾಯ–ಏಳು

## ಸಮಾರೋಪ

ಆರ್.ಬಿ.ಚಿಲಮಿಯವರು ಈವರೆಗೆ ಬರೆದ ಕೃತಿಗಳಾದ ಬತ್ತೀಸರಾಗ, ವಚನವೃಷಭ, ಬ.ಗಿ.ಯಲ್ಲಟ್ಟಿ : ಸಮಗ್ರ ಸಾಹಿತ್ಯ, ಜನಪದಸಿರಿ, ಅಪ್ಪ, ಅವ್ವ ಮತ್ತು ನಾನು, ಜೀವನ ಚರಿತ್ರೆಗಳು. ಸಂಪಾದಿತ ಕೃತಿಗಳು ಅಲ್ಲದೆ ಬಿಡಿ ಸಂಶೋಧನ ಲೇಖನಗಳು ಇವುಗಳು ಒಳಗೊಂಡಿರುವ ಅಂಶಗಳನ್ನು ಕುರಿತು ಅಧ್ಯಯನ ಮಾಡಿ ಸ್ಥೂಲ ಪರಿಚಯ ಮಾಡಿಕೊಡಲಾಗಿದೆ. ಚಿಲಮಿ ಅವರ ಬರಹಗಳನ್ನು ಆ ಕಾಲಘಟ್ಟದ ನೆಲೆಯಲ್ಲಿ ನಿಂತು ಬರೆಯಲಾಗಿದೆ. ಕವಿಯಾಗಿ, ವಿಮರ್ಶಕರಾಗಿ, ಜೀವನ ಚರಿತ್ರೆಕಾರರಾಗಿ ಸಾಹಿತ್ಯದಲ್ಲಿ ಮೇಲೇರಿದ ಚಿಲಮಿ ಅವರ ಬರಹಗಳ ಮೌಲ್ಯ ಮಾಪನ ಮಾಡಲಾಗಿದೆ. ಚಿಲಮಿಯವರು ವಸ್ತುನಿಷ್ಠ ವಿಮರ್ಶಕರಾಗಿದ್ದಾರೆ ಸಮಕಾಲೀನ ಸಂದರ್ಭದೊಡನೆ ಅವರು ಮುಖಾಮುಖಿಯಾಗುವುದು ಕೊಂಚ ಕಡಿಮೆ ಎಂದೇ ಹೇಳಬಹುದು. ಆದರೂ ಅವರ ಬರಹಗಳು ಅವರದೇ ಆದ ಅನನ್ಯತೆಯಿಂದ ಕೂಡಿದೆ.

ಚಿಲಮಿ ಅವರ ಸಂಶೋಧನ ಮಹಾಪ್ರಬಂಧ ಒಂದು ವಿವೇಚನೆ ಶೀರ್ಷಿಕೆ ಅಡಿಯಲ್ಲಿ ನವೋದಯ ಪಂಥದ ಬ.ಗಿ.ಯಲ್ಲಟ್ಟಿ: ಸಮಗ್ರ ಸಾಹಿತ್ಯ ಎಂಬ ವಿಷಯ ಕುರಿತು ಆರ್.ಬಿ.ಚಿಲಮಿಯವರು ಸಂಶೋಧನೆ ಮಾಡಿ ಪಿಎಚ್.ಡಿ.ಪದವಿ ಪಡೆದ ಗ್ರಂಥವನ್ನು ಅಧ್ಯಯನಕ್ಕೊಳಪಡಿಸಿದೆ. ಇದರಲ್ಲಿ ಚಿಲಮಿಯವರು ಬ.ಗಿ.ಯಲ್ಲಟ್ಟಿಯವರ ಬದುಕು ಮತ್ತು ಅವರ ಸಾಹಿತ್ಯವನ್ನು ವಿಭಾಗಿಸಿ ವಿವಿಧ ನೆಲೆಗಳಲ್ಲಿ ಅಧ್ಯಯನ ಮಾಡಿದ ಕ್ರಮವನ್ನು ಮತ್ತು ಯಲ್ಲಟ್ಟಿಯವರ ಗುಣ ಸ್ವಭಾವವನ್ನು ಹಿರಿಯ ಸಾಹಿತಿಗಳೊಂದಿಗೆ ಯಲ್ಲಟ್ಟಿಯವರು ಇಟ್ಟುಕೊಂಡ ಸಂಬಂಧ ಮತ್ತು ಅವರ ಸಾಹಿತ್ಯ ಮೌಲ್ಯವನ್ನು ಕುರಿತು ಚಿಲಮಿ ಅವರು ಅಧ್ಯಯನ ಮಾಡಿದ ರೀತಿಯನ್ನು ವಸ್ತುನಿಷ್ಠವಾಗಿ ಅಧ್ಯಯನ ಮಾಡಲಾಗಿದೆ. ಎಲೆಮರೆ

ಕಾಯಿಯಂತೆ ಕೆಲಸ ಮಾಡಿದ ಯಲ್ಲಟ್ಟಿ ಅವರ ಬರಹಗಳನ್ನು ಅವರ ಸಮಕಾಲೀನರಾದ ದುಂ.ನಿಂ.ಬೆಳಗಲಿ, ಈಶ್ವರ ಸಣಕಲ್ಲ, ಭುಜೇಂದ್ರ ಮಹೀಶವಾಡಿ, ಜಿ.ಎ.ಸನದಿ ಅವರ ಬರಹಗಳ ಜೊತೆಗೆ ತೌಲನಿಕವಾಗಿ ವಿವೇಚಿಸಲಾಗಿದೆ. ಯಲ್ಲಟ್ಟಿ ಅವರ ಬರಹಗಳ ಅನನ್ಯತೆಯನ್ನು ಮತ್ತು ಹೊಸಗನ್ನಡ ಸಾಹಿತ್ಯದಲ್ಲಿ ಅವರ ಸ್ಥಾನವನ್ನು ಗುರುತಿಸಿ ವಿವೇಚಿಸಿದ್ದಾರೆ. ಚಿಲಮಿಯವರ ಮಹಾಪ್ರಬಂಧದ ಮೌಲ್ಯಿಕತೆಯನ್ನು ವಿಮರ್ಶಾತ್ಮಕವಾಗಿ ವಿವೇಚಿಸಲಾಗಿದೆ.

ಚಿಲಮಿ ಅವರು ರಚಿಸಿದ ಜೀವನ ಚರಿತ್ರೆಗಳನ್ನು ಅಧ್ಯಯನಕ್ಕೊಳಪಡಿಸಿದೆ ಇದರಲ್ಲಿ ಕುಳ್ಳೂರು ಕಲ್ಮಠದ ಶ್ರೀ ರೇವಣಸಿದ್ಧೇಶ್ವರ ಶಿವಯೋಗಿಗಳ ಚಿರಿತ್ರೆ, ಕುಳ್ಳೂರು ಕಲ್ಮಠದ ಶ್ರೀ ಸಿದ್ಧರಾಮೇಶ್ವರ (ಚುಳಕ್ಕೆಪ್ಪನವರು) ಶಿವಯೋಗಿಗಳ ಚರಿತ್ರೆ, ಕುಳ್ಳೂರು ಕಲ್ಮಠದ ಶ್ರೀ ಶಿವಯೋಗಿಶ್ವರರ ಚರಿತ್ರೆ ಇವುಗಳನ್ನು ರೂಪಿಸಿದ ಬಗೆ ಈ ಚರಿತ್ರೆಗಳನ್ನು ಬರೆಯಲು ಕಾರಣವಾದ ಅಂಶಗಳು ಚಿಲಮಿಯವರು ಸ್ವಾಮಿಗಳನ್ನು ಚರಿತ್ರೆನಾಯಕರನ್ನಾಗಿಸಿಕೊಂಡ ಬಗೆ, ಸ್ವಾಮಿಗಳ ಸಮಜೋಪಯೋಗಿ ಕಾರ್ಯಗಳನ್ನು ದಾಖಲಿಸಿದ ರೀತಿ ಮುಂತಾದ ಅಂಶಗಳನ್ನು ಅಧ್ಯಯನಕ್ಕೊಳಪಡಿಸಿದೆ ಈ ಚರಿತ್ರೆಗಳಲ್ಲಿ ಚಿಲಮಿಯವರು ಸಾಮಾಜಿಕ ವ್ಯವಸ್ಥೆಯಲ್ಲಿ ಧರ್ಮ ಪೀಠವನ್ನೇರಿದ ಸ್ವಾಮಿಗಳು ಸಾಧಕರಾಗಿ ಸಮಾಜಕ್ಕೆ ಯಾವ ರೀತಿ ಸೇವೆಯನ್ನು ಸಲ್ಲಿಸಬೇಕು, ಸಾಧಕರಾಗಿ ಅವರು ಮಾಡಬೇಕಾದ ಕೆಲಸಗಳೇನು, ಧರ್ಮ ಪ್ರಚಾರದಲ್ಲಿ ಸ್ವಾಮಿಗಳ ಪಾತ್ರ ಎಂತಹದ್ದು ಮುಂತಾದ ಅಂಶಗಳನ್ನು ಇವರು ವಸ್ತುನಿಷ್ಠವಾಗಿ ಈ ಚರಿತ್ರೆಗಳಲ್ಲಿ ಸೆರೆಹಿಡಿದಿದ್ದಾರೆ. ಜೀವನ ಚರಿತ್ರೆ ರಚನೆಯಲ್ಲಿ ಚಿಲಮಿಯವರು ವಸ್ತುನಿಷ್ಠವಾಗಿ ವಿಷಯಗಳನ್ನು ರೇಖಿಸಿದ್ದಾರೆ. ಅವರ ಬರಹದ ಭಾಷೆ ಮತ್ತು ಶೈಲಿ ಸೋಪಜ್ಞತೆಯಿಂದ ಕೂಡಿದೆ. ಒಂದು ಕಾಲ ಘಟ್ಟದ ಸಂಪ್ರದಾಯದ ಪರಿಯನ್ನು ತಿಳಿದುಕೊಳ್ಳಲು ಚಿಲಮಿ ಅವರು ರಚಿಸಿದ ಜೀವನ ಚರಿತ್ರೆಗಳು ಆಕರವಾಗಿವೆ.

ಚಿಲಮಿಯವರ 'ಬತ್ತೀಸರಾಗ' ಎಂಬ ಕವನಸಂಕಲನವನ್ನು ವಿವಿಧ ಆಯಾಮಗಳಲ್ಲಿ ಅಧ್ಯಯನಕ್ಕೊಳಪಡಿಸಿದೆ. ೩೨ ಕವನಗಳನ್ನು ಒಳಗೊಂಡಿರುವ ಕೃತಿಯನ್ನು ಅಧ್ಯಯನದ ದೃಷ್ಟಿಯಿಂದ ಪ್ರಕೃತಿ ಚಿತ್ರಣ, ಸಾಮಾಜಿಕ ಚಿತ್ರಣ, ವ್ಯಕ್ತಿಚಿತ್ರಣ, ಧಾರ್ಮಿಕ ನೇತಾರರು, ಅಂತರಂಗ ವಿವೇಚನೆ ಎಂದು ವಿಂಗಡಿಸಿ ಚಿಲಮಿಯವರ ಧ್ಯೇಯ ಧೋರಣೆಗಳನ್ನು, ಭಾಷಿಕ ಆಕೃತಿಗಳನ್ನು ವಸ್ತುನಿಷ್ಠವಾಗಿ ತಿಳಿಸಲಾಗಿದೆ. ಈ ಅಧ್ಯಾಯದಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಘಟಿಸುವ ಘಟನೆಗಳನ್ನು ಚಿಲಮಿಯವರು ಗ್ರಹಿಸಿದ ಬಗೆ ಅವರ ಸಾಮಾಜಿಕ ಕಾಳಜಿ ಮತ್ತು ಕವನದ ರಚನಾ ತಂತ್ರವನ್ನು ಕುರಿತು ವಿವರವಾಗಿ ಚರ್ಚಿಸಲಾಗಿದೆ.

ಚಿಲಮಿ ಅವರ ಬರವಣಿಗೆಯ ಶೈಲಿಯನ್ನು ಕುರಿತು ಹೇಳುವುದಾದರೆ ಇವರ ಬರವಣಿಗೆ ಶೈಲಿ ಸರಳವಾದುದು. ಭಾಷಾ ತಂತ್ರದಿಂದೊಡಗೂಡಿದ ಚಿತ್ರ ವೃತ್ತಿ ಪ್ರತಿಬಿಂಬವೇ ಶೈಲಿ ಎನ್ನುತಾರೆ. ಒಬ್ಬೊಬ್ಬರಿಗೂ ಒಂದೊಂದು ಶೈಲಿ ಇದ್ದೇ ಇರುತ್ತದೆ. ಅಷ್ಟೇ ಅಲ್ಲ ಒಬ್ಬ ವ್ಯಕ್ತಿಯ ಬರವಣಿಗೆಯಲ್ಲಿಯೇ ಅವನ ಮನೋಗತಿಗೆ ಅನುಗುಣವಾದ ಶೈಲಿಯ ವೈವಿಧ್ಯವನ್ನು ಗುರುತಿಸಬಹುದು. ವಸ್ತು ವಿಷಯವನ್ನು ಚಿಲಮಿಯವರು ತಾವು ಬದುಕಿದ ಸಮಾಜದಿಂದಲೇ ಎತ್ತಿಕೊಂಡು ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಅಭಿವ್ಯಕ್ತಿಯ ವಸ್ತು ಯಾವುದೇ ಇರಲಿ ಅವರ ಬರವಣಿಗೆಯ ಶೈಲಿಗೆ ದಕ್ಕೆ ಇಲ್ಲ ಎಂದೆನಿಸುತ್ತದೆ. ಅವರ ಮಾತಿನ ಧಾಟಿ ವಾಕ್ಯ ರಚನಾ ವಿಧಾನ ಆಡುಮಾತಿಗೆ ಹತ್ತಿರವಾಗಿದೆ. ಆದ್ದರಿಂದ ಚಿಲಮಿಯವರನ್ನು ಸರಳ ಶೈಲಿಯ ಲೇಖಕರೆಂದು ಗುರುತಿಸಬಹುದಾಗಿದೆ. ಇವರು ತಮ್ಮ ಬರವಣಿಗೆಯಲ್ಲಿ ಬಳಸಿದ ಭಾಷೆ ಎಲ್ಲಿಯೂ ಆವೇಷ, ಆಕ್ರೋಶ, ಅಲ್ಲೋಲ ಕಲ್ಲೋಲಗಳಿಗೆ ಅವಕಾಶ ನೀಡುವುದಿಲ್ಲ. ನಿರರ್ಥಕ, ಪೇಲವ, ಪದಪ್ರಯೋಗಗಳಾಗಲಿ, ಜಟಿಲವೂ ಸುಧೀರ್ಘವೂ ಆದ ವಾಕ್ಯವಾಗಲಿ, ಅವರು ಬಳಸಿದ ಭಾಷೆಯಲ್ಲಿ ಕಂಡುಬರುವುದಿಲ್ಲ ಬದಲಾಗಿ ಸರಳ ಮತ್ತು ನೇರ ಭಾಷಾ ಬಳಕೆಯನ್ನು ಇವರ ಸಾಹಿತ್ಯದಲ್ಲಿ ಕಾಣಬಹುದು.

ಈ ಅಧ್ಯಯನದಲ್ಲಿ ಚಿಲಮಿಯವರು ಪ್ರಕಟಿತ ಕೃತಿಗಳನ್ನು ಪ್ರಧಾನೀಕರಿಸಿ ಅಧ್ಯಯನ ಮಾಡಲಾಗಿದೆ. ಅವರ ಅಪ್ರಕಟಿತ ಒಂದೆರಡು ಕೃತಿಗಳನ್ನು ಅಧ್ಯಯನಕ್ಕೊಳಪಡಿಸಿದರು ಪ್ರಧಾನವಾಗಿ ಪರಿಗಣಿಸಿಲ್ಲ (ಅಂದರೆ ಆಕೃತಿಗಳ ಆಳಕ್ಕೆ ಇಳಿದು ಅಧ್ಯಯನ ಮಾಡಿದೆ) ಮುಂದಿನ ಅಧ್ಯಯನಕಾರು ಇವರ ಸಮಗ್ರ ಕೃತಿಗಳನ್ನು (ಪ್ರಕಟಿತ/ಅಪ್ರಕಟಿತ) ಆಳವಾಗಿ ಅಧ್ಯಯನ ಮಾಡಬಹುದಾಗಿದೆ.

ಚಿಲಮಿಯವರ ಬದುಕು ಬರಹದ ಅಧ್ಯಯನವು ಅವರ ಕೃತಿಗಳ ವಸ್ತು ಆಯ್ಕೆ ಭಾಷೆ ಮತ್ತು ಶೈಲಿ, ಕೃತಿ ರಚನಾ ತಂತ್ರ, ಸಂಶೋಧನಾ ವಿಧಾನ ಮುಂತಾದ ಅಂಶಗಳನ್ನು ತಿಳಿದುಕೊಳ್ಳಲು ಸಾಧ್ಯವಾಗಿದೆ. ಮುಂದಿನ ಅಧ್ಯಯನಕಾರರಿಗೆ ಇವರು ಇತರ ಸಾಹಿತಿಗಳಿಗಿಂತ ಹೀಗೆ ಭಿನ್ನ ಎಂಬುದನ್ನು ಗುರುತಿಸಲು ಈ ಅಧ್ಯಯನವು ಪ್ರಧಾನ ಆಕರವಾಗಿದೆ. ಒಟ್ಟಾರೆ, ಉಪೇಕ್ಷೆಗೆ ಒಳಗಾದ ಬರಹಗಾರರಾದ ಚಿಲಮಿ ಅವರ ಸಾಹಿತ್ಯದ ಬಗ್ಗೆ ವಿವೇಚನೆ ಮಾಡಲಾಗಿದೆ.

# ಅನುಬಂಧಗಳು

ಆರ್.ಬಿ.ಚಿಲಮಿ ಅವರ ಜೀವನದ ಮುಖ್ಯ ಘಟನೆಗಳು

ಆರ್.ಬಿ.ಚಿಲಮಿ ಅವರ ಕೃತಿಗಳು

ಪರಾಮರ್ಶನ ಗ್ರಂಥಗಳು

# ಆರ್.ಬಿ.ಚಿಲಮಿ ಅವರ ಜೀವನದ ಮುಖ್ಯ ಘಟನೆಗಳು

| | | |
|---|---|---|
| **ಪೂರ್ಣ ಹೆಸರು** | : | **ರುದ್ರಪ್ಪ, ಬಸಪ್ಪ ಚಿಲಮಿ** |
| ೨.೩.೧೯೫೧ | : | ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲೂಕಿನ ಹೊಸಕೋಟಿಯಲ್ಲಿ ಜನನ |
| ತಂದೆ | : | ಬಸಪ್ಪ |
| ತಾಯಿ | : | ಸಾವಂತ್ರೆವ್ವ |
| ೧೯೫೭ | : | ಪ್ರಾಥಮಿಕ ಶಿಕ್ಷಣ ಹೊಸಕೋಟಿ |
| ೧೯೬೪ | : | ಮಾಧ್ಯಮಿಕ ಶಿಕ್ಷಣ ಹೊಸಕೋಟಿ |
| ೧೯೬೮ | : | ಪ್ರೌಢ ಶಿಕ್ಷಣ ದ್ವಿತೀಯ ಶ್ರೇಣಿಯಲ್ಲಿ ಎಸ್.ಎಸ್.ಎಲ್.ಸಿ ತೇರ್ಗಡೆ, ಶ್ರೀ ರೇವಣಸಿದ್ಧೇಶ್ವರ ಪ್ರೌಢಶಾಲೆ ಹೊಸಕೋಟಿ |
| ೧೯೭೦ | : | ಪದವಿ ಪೂರ್ವ ಶಿಕ್ಷಣ, ಸ್ಟೇಟ್ ಸಂಯುಕ್ತ ಪದವಿ ಪೂರ್ವ ಕಾಲೇಜ್, ರಾಮದುರ್ಗ |
| ೧೯೭೩ | : | ಸ್ನಾತಕ ಪದವಿ (ಕನ್ನಡ ಪ್ರಧಾನ ವಿಷಯ) ಸಿ.ಎಸ್.ಬೆಂಬಳಗಿ ಕಲಾ, ವಿಜ್ಞಾನ ಮತ್ತು ವಾಣಿಜ್ಯ ಪದವಿ ಮಹಾವಿದ್ಯಾಲಯ, ರಾಮದುರ್ಗ |
| ೧೯೭೫ | : | ಸ್ನಾತಕೋತ್ತರ ಪದವಿ (ಕನ್ನಡ ಸಾಹಿತ್ಯ) ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ. |
| ೧೯೭೬ | : | ಕೃಷಿ ಕಾಯಕದಲ್ಲಿ ನಿರತ. |
| ೧೯೭೭-೭೮ | : | ಸರಕಾರಿ ನೌಕರಿಗಾಗಿ ವಿವಿಧ ನಗರಗಳಲ್ಲಿ ಅಲೆದಾಟ |
| ೧೯೭೮ ನವೆಂಬರ್ | : | ಸಬ್‌ರಿಜಿಸ್ಟರ್ ಹುದ್ದೆಗೆ ಸಂದರ್ಶನಕ್ಕೆ ಹಾಜರು ಲಂಚ ಕೇಳಿದ ಸಂದರ್ಶಕರ ವಿರುದ್ಧ ವಾಗ್ವಾಳಿ ಮರಳಿ ಊರಿಗೆ ಬಂದದು. |
| ೧೯೭೯ | : | ಗದಗ ನಗರದ ಶ್ರೀ ಎ.ಕೆ.ಶಿವನಗುತ್ತಿ ಖಾಸಗಿ ಕಾರ್ಖಾನೆಯಲ್ಲಿ ಗುಮಾಸ್ತರಾಗಿ ವೃತ್ತಿ ಜೀವನ ಪ್ರಾರಂಭಿಸಿದು. |

೦೮.೦೯.೧೯೭೯ : ಸುವರ್ಣಾ ಅವರೊಂದಿಗೆ ವಿವಾಹ

೧೯೮೨-೧೯೮೪ : ಧಾರವಾಡ ಜಿಲ್ಲೆ ನರಗುಂದ ತಾಲೂಕಿನ ಕೊಣ್ಣೂರಿನಲ್ಲಿ ಪದವಿ ಪೂರ್ವ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ಸೇವೆ

೦೧.೦೨.೧೯೮೫ : ಮಗಳು ರೋಹಿಣಿ ಜನನ

ಜೂನ್ ೧೯೮೫ : ಬೆಳಗಾವಿ ಜಿಲ್ಲೆಯ ರಾಯಬಾಗ ತಾಲೂಕಿನ ಹಾರೂಗೇರಿಯ ಶ್ರೀ ವೃಷಭೇಂದ್ರ ಪದವಿ ಮಹಾವಿದ್ಯಾಲಯದಲ್ಲಿ ಅರೆಕಾಲಿಕ ಕನ್ನಡ ಉಪನ್ಯಾಸಕರಾಗಿ ಸೇವೆ ಆರಂಭ

೨೧.೦೯.೧೯೮೯ : ಮಗ ರೋಹಿತ್ ಜನನ

೧೯೯೦ : ಶ್ರೀ ವೃಷಭೇಂದ್ರ ಪದವಿ ಮಹಾವಿದ್ಯಾಲಯದಲ್ಲಿ ಪೂರ್ಣ ಪ್ರಮಾಣದ ಕನ್ನಡ ಉಪನ್ಯಾಸಕರಾಗಿ ನೇಮಕ. ಸೇವೆ ಮುಂದುವರಿಕೆ.

೧೯೯೨-೧೯೯೩ : ಕನ್ನಡ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿ ಸಾಹಿತ್ಯದ ಗೀಳು ಹಚ್ಚಿಕೊಂಡಿದ್ದು

೧೯೯೪-೧೯೯೫ : ಕವನ ರಚನೆ ಆರಂಭಿಸಿದ್ದು.

೧೯೯೬ : ಆಧುನಿಕ ವಚನ ರಚನೆ. (ಸ್ತುತಿ ವಚನ)

೧೯೯೬ : ಬೇಂದ್ರೆ ಅವರ ಸಖಿಗೀತ ಒಂದು ಅವಲೋಕನ ಎಂಬ ವಿಮರ್ಶಾ ಲೇಖನ ಬರೆದಿದ್ದು.

೧೯೯೭ : ಮೊದಲ ಲೇಖನ (ಕುರುಹಿನ ಶೆಟ್ಟಿ ಸಮಾಜದ ಸಂಘಟನೆಗಳು) ಕುರುಹು- ಅರಿವು ಸ್ಮರಣ ಸಂಚಿಕೆಯಲ್ಲಿ ಪ್ರಕಟ

೧೯೯೭ : ಕುರುಹು- ಅರಿವು ಸ್ಮರಣ ಸಂಚಿಕೆಯ ಸಹಾಯಕ ಸಂಪಾದಕರಾದುದ್ದು.

೧೯೯೮ : ಮೊದಲ ಕವನ 'ದಡ ಸೇರದವರು' ಸ್ನೇಹ ಕುಂಜ ಪತ್ರಿಕೆಯಲ್ಲಿ ಪ್ರಕಟ.

೧೯೯೯ : ದಕ್ಷಿಣ ಕನ್ನಡ ಜಿಲ್ಲೆಯ ಮಣಿಪಾಲ್‌ನಲ್ಲಿ ಎನ್.ಎಸ್.ಎಸ್.ಯೋಜನಾಧಿಕಾರಿಯಾಗಿ ತರಬೇತಿ ಶಿಬಿರದಲ್ಲಿ ಪಾಲ್ಗೊಂಡದ್ದು.

೨೦೦೦ : 'ಬಸವಣ್ಣನವರು ನಿರೂಪಿಸಿದ ಷಟಸ್ಥಲಗಳು' ಎಂಬ ಲೇಖನ ಬಸವ ಪಥ ಮಾಸ ಪತ್ರಿಕೆಯಲ್ಲಿ ಪ್ರಕಟ ರಾಜ್ಯದೆಲ್ಲೆಡೆಯಿಂದ ಪ್ರಶಂಸೆಯ ಮಹಾಪೂರ ಬಂದಿದ್ದು.

೨೦೦೦ : ಡಾ.ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಇಲ್ಲಿ ಪಿಎಚ್.ಡಿ., ನೋಂದಾಯಿಸಿದ್ದು (ಮಾರ್ಗದರ್ಶಕರು ಡಾ.ವ್ಹಿ.ಎಸ್.ಮಾಳಿ).

೨೦೦೧ : ಬೆಳಗಾವಿ ಜಿಲ್ಲೆ ರಾಯಬಾಗ ತಾಲ್ಲೂಕ ಮಕ್ಕಳ ಸಾಹಿತ್ಯ ವೇದಿಕೆಯ ಅಧ್ಯಕ್ಷರಾದದ್ದು.

೨೦೦೨ : ಜೀವನ ಚರಿತ್ರೆಗಳನ್ನು ರಚಿಸಲು ಪ್ರಾರಂಭಿಸಿದ್ದು.

೨೦೦೨ : ರಾಯಬಾಗ ತಾಲೂಕಿನ ಹತ್ತಾರು ಹಳ್ಳಿಗಳಲ್ಲಿ ಉಪನ್ಯಾಸ ನೀಡಿದ್ದು (೧೫ಕ್ಕೂ ಹೆಚ್ಚು ಉಪನ್ಯಾಸಗಳು).

೨೦೦೩ : ಮೊದಲ ಕಥೆ 'ಪ್ರಾಮಾಣಿಕತೆ' ನ್ಯಾನಕ್ಕಾಗಿ ನಾನು ಪತ್ರಿಕೆಯಲ್ಲಿ ಪ್ರಕಟ

೨೦೦೩ : ಚಿಲಮಿ ಅವರನ್ನು ಜಮಖಂಡಿ ಕಾಲೇಜಿಗೆ ವರ್ಗಾವಣೆ ಮಾಡಿದ್ದನ್ನು ವಿರೋಧಿಸಿ ಹೈಕೋರ್ಟ್ ಮೆಟ್ಟಿಲೇರಿ ಜಯ ಸಾಧಿಸಿದ್ದು.

೨೦೦೪ : 'ಬ.ಗಿ.ಯಲ್ಲಟ್ಟಿ ಸಮಗ್ರ ಸಾಹಿತ್ಯ' ಪಿಎಚ್.ಡಿ ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಡಾಕ್ಟರೆಟ್ ಪದವಿ ಪಡೆದದ್ದು.

೨೦೦೫ : ಬಿ.ಎ.ಭಾಗ-೧ರ ಪ್ರಬಂಧ ಸಂಪದ ಪಠ್ಯ ಪುಸ್ತಕದ ಸಂಪಾದಕರಾದದ್ದು.

| | | |
|---|---|---|
| ೨೦೦೫ | : | ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು ಇವರಿಂದ ಸನ್ಮಾನ ಸ್ವೀಕರಿಸಿದ್ದು. |
| ೨೦೦೬ | : | ಬೆಳಗಾವಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ವ್ಯವಸ್ಥಾಪಕರಾದದ್ದು. |
| ೨೦೦೬ | : | ಭಾರತ ಸರ್ಕಾರದ ಅಡಿಯಲ್ಲಿ ರಾಯಬಾಗ ತಾಲ್ಲೂಕಿನ ಹಸ್ತಪ್ರತಿ ಸರ್ವೇಕ್ಷಣೆ ಕೈಗೊಂಡು ಅಲಭ್ಯೆರಿ ಕವಿಯ ಕೃತಿಯನ್ನು ಶೋಧಿಸಿ ಸಂಪಾದಿಸಿದ್ದು. |
| ೨೦೦೭ | : | ಶ್ರೀ ವೀರಭದ್ರೇಶ್ವರ ಪ್ರಕಾಶನ ಸಂಸ್ಥೆ ಹುಟ್ಟುಹಾಕಿದ್ದು. |
| ೨೦೦೭ | : | 'ಬತ್ತೀಸ ರಾಗ' ಪ್ರಥಮ ಕವನ ಸಂಕಲನ ಪ್ರಕಟವಾಗಿದ್ದು |
| ೨೦೦೭ | : | ಬ.ಗಿ.ಯಲ್ಲಟ್ಟಿ : ಸಮಗ್ರ ಸಾಹಿತ್ಯ ಗ್ರಂಥ ಪ್ರಕಟವಾದದ್ದು |
| ೧೯.೦೭.೨೦೦೭ | : | ಕನ್ನಡ ವಿ.ವಿ.ಹಂಪಿಯ ಸ್ನಾತಕೋತ್ತರ ಕೇಂದ್ರ ಹಾರೂಗೇರಿಯ ಸಂಯೋಜಕರಾಗಿ ನೇಮಕ. |
| ೨೦೦೭ | : | 'ಅಲಭ್ಯೆರಿ ಕವಿಯ ಭಜನೆ ಪದಗಳು' ಸಂಪಾದನಾ ಕೃತಿ ಪ್ರಕಟ |
| ೨೦೦೮ ಮೇ | : | 'ವಚನ ವೃಷಭ' ಆಧುನಿಕ ವಚನ ಸಂಕಲನ ಪ್ರಕಟ. |
| ೨೦೦೮ | : | ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ ಹಾರೂಗೇರಿ ಎಂ.ಫಿಲ್, ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ |
| ೨೦೦೮ | : | 'ಜಾನಪದ ಸಿರಿ' ಲೇಖನಗಳ ಸಂಕಲನ ಪ್ರಕಟ ಮಾಡಿದ್ದು |

## ೨. ಆರ್.ಬಿ.ಚಿಲಮಿ ಅವರ ಕೃತಿಗಳು

### ಅ. ಪ್ರಕಟಿತ ಕೃತಿಗಳು

| | | |
|---|---|---|
| ೧. ಪ್ರಬಂಧ ಸಂಪದ | : | (ಸಂಪಾದನೆ) ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೫ |
| ೨. ಬತ್ತೀಸರಾಗ | : | (ಕವನ ಸಂಕಲನ) ಶ್ರೀ ವೀರಭದ್ರೇಶ್ವರ ಪ್ರಕಾಶನ ಹಾರೂಗೇರಿ ೨೦೦೭ |
| ೩. ಬ.ಗಿ.ಯಲ್ಲಟ್ಟಿ ಸಮಗ್ರ ಸಾಹಿತ್ಯ | : | (ಪಿಎಚ್.ಡಿ. ಮಹಾಪ್ರಬಂಧ) |
| ೪. ಅಲಭ್ಯೆರಿ ಕವಿಯ ಭಜನೆಯ ಪದಗಳು | : | (ಸಂಪಾದನೆ) ಶ್ರೀ ವೀರಭದ್ರೇಶ್ವರ ಪ್ರಕಾಶನ ಹಾರೂಗೇರಿ-೨೦೦೭ |
| ೫. ವಚನ ವೃಷಭ | : | (ಆಧುನಿಕ ವಚನ ಸಂಕಲನ) ಶ್ರೀ ವೀರಭದ್ರೇಶ್ವರ ಪ್ರಕಾಶನ ಹಾರೂಗೇರಿ-೨೦೦೮ |
| ೬. ಜಾನಪದ ಸಿರಿ | : | (ಸಂಶೋಧನ ಲೇಖನಗಳ ಸಂಕಲನ) ಶ್ರೀ ವೀರಭದ್ರೇಶ್ವರ ಪ್ರಕಾಶನ ಹಾರೂಗೇರಿ ೨೦೦೮ |
| ೭. ಅಲಭ್ಯೆರಿ ಕವಿಯ ಡೊಳ್ಳಿನ ಹಾಡುಗಳು | : | (ಸಂಪಾದನೆ) ಶ್ರೀ ವೀರಭದ್ರೇಶ್ವರ ಪ್ರಕಾಶನ ಹಾರೂಗೇರಿ-೨೦೦೮ |
| ೮. ಅಪ್ಪ; ಅವ್ವ ಮತ್ತು ನಾನು | : | (ಕವನ ಸಂಕಲನ) ಶ್ರೀ ವೀರಭದ್ರೇಶ್ವರ ಪ್ರಕಾಶನ ಹಾರೂಗೇರಿ-೨೦೦೮ |
| ೯. ಕಳ್ಳೂರು ಕಲ್ಮಠದ ಶಿವಯೋಗಿಗಳ ಚರಿತ್ರೆ | : | ಶ್ರೀ ವೀರಭದ್ರೇಶ್ವರ ಪ್ರಕಾಶನ, ಹಾರೂಗೇರಿ-೨೦೦೮ |
| ೧೦. ಕಳ್ಳೂರು ಕಲ್ಮಠದ ರೇವಯ್ಯನವರ ಚರಿತ್ರೆ | : | ಶ್ರೀ ವೀರಭದ್ರೇಶ್ವರ ಪ್ರಕಾಶನ, ಹಾರೂಗೇರಿ-೨೦೦೮ |
| ೧೧. ಕಳ್ಳೂರು ಕಲ್ಮಠದ ಸಿದ್ಧರಾಮೇಶ್ವರ ಚರಿತ್ರೆ | : | ಶ್ರೀ ವೀರಭದ್ರೇಶ್ವರ ಪ್ರಕಾಶನ, ಹಾರೂಗೇರಿ-೨೦೦೮ |

## ಆ. ಅಪ್ರಕಟಿತ ಕೃತಿಗಳು

೧. ಕುರುಹಿನಶೆಟ್ಟಿ ಸಮಾಜ : ಒಂದು ಅಧ್ಯಯನ

೨. ಜೈನ ದರ್ಶನ ಶಾಸ್ತ್ರ

೩. ಜನಪದ ಸಿರಿಗಂಧ

೪. ಬಸವಕಿರಣ ಸುತ್ತಮುತ್ತು (ಲೇಖನಗಳ ಸಂಕಲನ)

೫. ಸಾಹಿತ್ಯ ಸೌರಭ (ಲೇಖನಗಳ ಸಂಕಲನ)

೬. ಚಿಕ್ಕೇನಕೊಪ್ಪ ಚನ್ನವೀರ ಶರಣರ ನುಡಿಗಳು

೭. ಶ್ರೀ ಚನ್ನ ವೃಷಭೇಂದ್ರ ಮಹಾಸ್ವಾಮಿಗಳ ಚರಿತ್ರೆ

# ಆರ್.ಬಿ.ಚಿಲಮಿ ಅವರ ವಂಶಾವಳಿ



# ಪರಾಮರ್ಶನ ಗ್ರಂಥಗಳು


೧. ಕಲಬುರ್ಗಿ ಎಂ.ಎಂ., **ಕನ್ನಡ ಸಂಶೋಧನ ಶಾಸ್ತ್ರ,** ಚೇತನ ಬುಕ್ ಹೌಸ್, ಮೈಸೂರು-೧೯೯೫

೨. ಕುರ್ತುಕೋಟಿ ಕೆ.ಡಿ., ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಮನೋಹರ ಗ್ರಂಥಮಾಲಾ, ಧಾರವಾಡ-೧೯೬೭

೩. ಕೃಷ್ಣರಾಯ ಕೆ. (ಸಂ), ತ.ರಾ.ಸು ಬದುಕು-ಬರಹ, ವಿಶ್ವಭಾರತಿ, ಮಡಗಾಂವ (ಗೋವಾ) ೧೯೮೨

೪. ಗುರುಲಿಂಗ ಕಾಪಸೆ, ಮಧುರಚನ್ನರ-ಜೀವನ ಹಾಗೂ ಕೃತಿಗಳ ಸಮೀಕ್ಷೆ, ಪ್ರಸಾರಾಂಗ ಕ.ವಿ.ವಿ, ಧಾರವಾಡ-೧೯೭೬

೫. ಗುಂಡಣ್ಣ ಕಲಬುರ್ಗಿ, ಕಣವಿ ಮತ್ತು ಆಧುನಿಕ ಕಾವ್ಯ ಪರಂಪರೆ, ಸೌಜನ್ಯ ಪ್ರಕಾಶನ, ಮೂಡಲಗಿ-೨೦೦೦

೬. ಜ್ಯೋತಿ ಹೊಸೂರ ಮತ್ತು ಇತರರು, ಬೆಳುವಲ, ಕಾಲಗತಿ ಪ್ರಕಾಶನ, ರಾಯಬಾಗ-೧೯೮೩

೭. ಬಾಳಣ್ಣಾ ಸೀಗಿಹಳ್ಳಿ, ಡೆಪ್ಯೂಟಿ ಚನ್ನಬಸಪ್ಪನವರು, ನಾಗನೂರು ರುದ್ರಾಕ್ಷಿ ಮಠ, ವೀರಶೈವ ಅಧ್ಯಯನ ಸಂಸ್ಥೆ, ಬೆಳಗಾವಿ-೧೯೯೨

೮. ಮಟೋಳಿ ಎಸ್.ಬಿ, ದು.ನಿಂ.ಬೆಳಗಲಿ ಬದುಕು-ಬರಹ ಒಂದು ಅಧ್ಯಯನ, ವಿಮೋಚನ ಪ್ರಕಾಶನ ಅಥಣಿ-೨೦೦೭

೯. ಮುಗಳಿ ರಂ.ಶ್ರೀ, ಕನ್ನಡ ಸಾಹಿತ್ಯ ಚರಿತ್ರೆ, ಉಷಾ ಸಾಹಿತ್ಯ ಮಾಲೆ, ಮೈಸೂರು-೧೯೭೮

೧೦. ರಾಜೇಂದ್ರ ಗಡಾದ, ಎನ್.ಜಿ.ಜಾಡಗೌಡರ ಜೀವನ ಹಾಗೂ ಸಾಹಿತ್ಯ, ಸಂಗಮ ಪ್ರಕಾಶನ ಗದಗ-೨೦೦೬

೧೧. ವಾಲಿ ಎಂ.ಎನ್, ಸಿಂಪಿ ಲಿಂಗಣ್ಣನವರ ಬದುಕು-ಬರಹ, ಭುವನೇಶ್ವರಿ ಪ್ರಕಾಶನ, ವಿಜಾಪೂರ-೧೯೯೦

೧೨. ಶಿರೂರ ಬಿ.ವ್ಹಿ, ಸಂಶೋಧನ ವ್ಯಾಸಂಗ, ಅನ್ನಪೂರ್ಣ ಪ್ರಕಾಶನ ಹುಬ್ಬಳ್ಳಿ-೧೯೯೬

೧೩. ಶಿವರುದ್ರಪ್ಪ ಜಿ.ಎಸ್, ಕಾವ್ಯಾರ್ಥ ಚಿಂತನ, ಶರಣ ಪ್ರಕಾಶನ, ಬೆಂಗಳೂರು-೧೯೮೩

೧೪. ಶಿವರುದ್ರಪ್ಪ ಜಿ.ಎಸ್.(ಪ್ರ.ಸಂ), ಆಲೂರು ವೆಂಕಟರಾಯರು ಜೀವನ ಹಾಗೂ ಕೃತಿಗಳು, ಕ.ವಿ.ವಿ.ಧಾರವಾಡ-೧೯೮೪

೧೫. ಶಿವಾನಂದ ಗಾಳಿ, ಮಿರ್ಜಿ ಅಣ್ಣಾರಾಯರು ಒಂದು ಅಧ್ಯಯನ, ಸುಂದರ ಪ್ರಕಾಶನ, ಶಕ್ತಿ ನಗರ ಧಾರವಾಡ-೧೯೯೫

೧೬. ಶೇಷಗಿರಿರಾವ್ ಎಲ್.ಎಸ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು-೧೯೯೯

೧೭. ಶ್ರೀಪಾದ ಶೆಟ್ಟಿ, ದಿನಕರ ದೇಸಾಯಿಯವರ ಬದುಕು-ಬರಹ, ಪ್ರಸಾರಾಂಗ ಕ.ವಿ.ವಿ, ಧಾರವಾಡ-೧೯೯೫

೧೮. ಸುಜಾತಾ ಎಚ್.ಎಸ್, ಎಂ.ಎಸ್.ಪುಟ್ಟಣ:ಒಂದು ಅಧ್ಯಯನ, ಐಬಿಎಚ್ ಪ್ರಕಾಶನ, ಗಾಂಧಿನಗರ, ಬಎಂಗಳೂರು-೧೯೮೧

೧೯. ಹಳ್ಳಿಕೇರಿ ಎಫ್.ಟಿ (ಸಂ), ದಶಕದ ಕನ್ನಡ ಸಾಹಿತ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೨

೨೦. ಹಿರೇಕೋಡಿ ಎಂ.ಬಿ. ಡಾ.ವೀರಣ್ಣಾ ರಾಜೂರ ಅವರ ಸಾಹಿತ್ಯ ಸಮೀಕ್ಷೆ, ಕ.ವಿ.ವಿ.ಧಾರವಾಡ ಅರ್ಪಿಸಿದ ಎಂ.ಫಿಲ್ ಗ್ರಂಥ (ಅಪ್ರಕಟಿತ-೧೯೯೮)

೨೧. ಹೆಗಡೆ ಜಿ.ಎಂ, ಮಾಸ್ತಿಯವರ ವಿಮರ್ಶೆ ಒಂದು ಅಧ್ಯಯನ, ಶ್ರೀಮಾತಾ ಪ್ರಕಾಶನ, ಧಾರವಾಡ-೧೯೭೯

